ಪ್ರಚಾರ ಪುಸ್ತಕ ಮಾಲೆ

251

# ಕನಕದಾಸ

ಮಳಲಿ ವಸಂತಕುಮಾರ್



ಪ್ರಚಾರ ಪುಸ್ತಕಮಾಲೆ–೨೫೧

# ಕನಕದಾಸ

ಮಳಲಿ ವಸಂತಕುಮಾರ್




೧೯೮೭

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆಯು ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ

ವಿಷಯಂಗಳನ್ನು ಕುರಿತ ಇನ್ನೂರ ಐವತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಮಳಲಿ ವಸಂತ ಕುಮಾರ್ ಅವರ 'ಕನಕದಾಸ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ವೈ. ಪಿ. ರುದ್ರಪ್ಪ
ಕುಲಪತಿಗಳು

# ಅರಿಕೆ

ಕನಕದಾಸರು ಕನ್ನಡದ ಮಹತ್ವದ ಕವಿಗಳಲ್ಲಿ ಒಬ್ಬರು. ಅವರ ಜೀವನ ಮತ್ತು ಸಾಧನೆಗಳ ಸಮಗ್ರ ಅಧ್ಯಯನ ಇಲ್ಲಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಚಿನ್ನದ ಹಬ್ಬದ ಅಂಗವಾಗಿ ಹಾಸನದಲ್ಲಿ ಏರ್ಪಾಟಾದ ಉಪನ್ಯಾಸ ಸಮಾರಂಭ ದಲ್ಲಿ ನಾನು ಕನಕದಾಸರನ್ನು ಕುರಿತು ಮಾಡಿದ ಉಪನ್ಯಾಸ ಇಲ್ಲಿ ಕೃತಿಯ ರೂಪದಲ್ಲಿ ಪ್ರಕಟವಾಗುತ್ತಿದೆ. ಇಂತಹ ಒಂದು ಸದಾವಕಾಶವನ್ನು ಒದಗಿಸಿಕೊಟ್ಟ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಕೆ. ಟಿ. ವೀರಪ್ಪನವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಕೃತಿಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನನಗೆ ಉಪಯುಕ್ತ ಸಲಹೆಗಳನ್ನಿತ್ತ ಡಾ. ಕೆ. ಕುಶಾಲಪ್ಪಗೌಡರನ್ನು ಗೌರವದಿಂದ ನೆನೆಯುತ್ತೇನೆ.

ಕೃತಿಯನ್ನು ಸುಂದರವಾಗಿ ಮುದ್ರಿಸಿಕೊಟ್ಟ ವಿಶ್ವವಿದ್ಯಾ ನಿಲಯದ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಹನುಮಯ್ಯ ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

೨೦–೫–೧೯೮೭ ಮುಳಲಿ ವಸಂತಕುಮಾರ್

# ಪರಿವಿಡಿ

# ೧. ಕನಕದಾಸರ ಕಾಲ ಮತ್ತು ಜೀವನ ವೃತ್ತಾಂತ

ಕನಕದಾಸರು ಕನ್ನಡದ ಮಹತ್ವದ ಕವಿಗಳಲ್ಲಿ ಒಬ್ಬರು, ಬಹುಮುಖ ಪ್ರತಿಭೆಯುಳ್ಳವರು; ಮೌಲಿಕ ಜೀವನಕ್ಕೆ ಹೆಸರಾದವರು. ವ್ಯಾಸರಾಯರಿಂದಲೇ "ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ" ಎಂದು ಮುಕ್ತ ಕಂಠದಿಂದ ಹೊಗಳಿಸಿಕೊಂಡವರು.

ಕನಕದಾಸರ ಸಮಕಾಲೀನರೂ, ಶ್ರೇಷ್ಠ ಕೀರ್ತನಕಾರರೂ ಆಗಿದ್ದ ಪುರಂದರದಾಸರೂ ಸಹ ಕನಕರನ್ನು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿದ್ದಾರೆ. ಹದಿನೇಳನೆಯ ಶತಮಾನದ ಕೆಲವು ತೆಲುಗು ಕವಿಗಳು ಕೂಡ ಕನಕರನ್ನು ಸ್ತುತಿಸಿರುವ ಪ್ರಸಂಗಗಳಿವೆ. ಇದರಿಂದ ಕನಕದಾಸರು ಕೀರ್ತನೆಕಾರರು ಮಾತ್ರವಲ್ಲದೆ ಉನ್ನತ ವ್ಯಕ್ತಿತ್ವವುಳ್ಳ ಮಹಾತ್ಮರೂ ಆಗಿದ್ದರೆಂದು ತಿಳಿದುಬರುತ್ತದೆ. ಸ್ವತಂತ್ರ ಪ್ರತಿಭೆಯ ಕವಿಗಳೂ, ಶ್ರೇಷ್ಠ ವಾಗ್ಗೇಯಕಾರರೂ, ದಿವ್ಯಜ್ಞಾನಿಗಳೂ ಆಗಿದ್ದ ಇವರು ಭಕ್ತಾಗ್ರೇಸರ ಪರಂಪರೆಗೆ ಸೇರಿದವರು. ಇವರು ಕನ್ನಡ ಸಾಹಿತ್ಯದಲ್ಲಿ ಪ್ರತಿಭಟನೆಯ ದನಿಯಾಗಿ ಕಾಣಿಸಿಕೊಂಡರು. ಸಾಮಾಜಿಕವಾಗಿ ಕೆಳಸ್ತರದಿಂದ ಬಂದ ಇವರನ್ನು ಮೇಲು ವರ್ಗದವರು ನೋಯಿಸಿದ್ದು ಇದಕ್ಕೆ ಕಾರಣವಾಯಿತು. ಈಗಲೂ "ಸಂಪ್ರದಾಯ ಹರಿದಾಸ ಪರಂಪರೆಯನ್ನು ಸ್ತುತಿಸುವಲ್ಲಿ ಕನಕದಾಸರ ಹೆಸರನ್ನು ಸೇರಿಸುವುದಿಲ್ಲ. ಆದರೆ ಜನಪ್ರಿಯತೆಯಲ್ಲಿ ಅವರು ಯಾರಿಗೂ ಎರಡನೆಯವರಲ್ಲ. ಸಂಪ್ರದಾಯ ಒಪ್ಪುವ ಅನೇಕರು ಇಂದು ನಮಗೆ ಗೊತ್ತಿಲ್ಲ. ಒಪ್ಪದ ಕನಕದಾಸರು ಚಿರಪರಿಚಿತರು".[1]

---

1. ನಾಯಕ ಹಾ. ಮಾ., ಮೆಚ್ಚುಮಾತು, ಕನಕಕಿರಣ, ಕಾ.ತ. ಚಿಕ್ಕಣ್ಣ (ಸ. IV)

## ಹೆಸರು

ಕನಕರಿಗೆ ಮೂಲದ ಹೆಸರು ಏನಿತ್ತು ಎನ್ನುವುದು ಇಂದಿಗೂ ಚರ್ಚಾಸ್ಪದ ವಿಷಯ. ಕನಕ, ಕನಕಪ್ಪ, ತಿಮ್ಮಪ್ಪ, ತಿಮ್ಮನಾಯಕ, ಇವುಗಳಲ್ಲಿ ಯಾವುದಾದರೊಂದು ಅವರಿಗೆ ಇಟ್ಟ ಹೆಸರಿರಬೇಕು. ತಿಮ್ಮಪ್ಪ, ತಿಮ್ಮನಾಯಕ ಎಂಬ ಹೆಸರಿಗೆ ಕೆಲವು ಐತಿಹ್ಯಗಳು ಮತ್ತು ದಂತಕಥೆಗಳು ಆಧಾರವಾಗಿವೆ. ಆ ಪ್ರಕಾರ:

ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿ ಬಾಡ ಎಂಬ ಊರಿನಲ್ಲಿ ಬೀರಪ್ಪ ಒಬ್ಬ ದಣನಾಯಕನಿದ್ದ. ಅವನಿಗೆ ಬಂಕಾಪುರವೂ ಸೇರಿದಂತೆ ಎಪ್ಪತ್ತೆಂಟು ಗ್ರಾಮಗಳ ನಾಡಗೌಡಿಕೆಯಿತ್ತು. ಈತ ತನ್ನ ವ್ಯಕ್ತಿತ್ವ ಮತ್ತು ಪರಾಕ್ರಮಗಳಿಂದ ವಿಜಯನಗರದ ದೊರೆಗಳ ವಿಶ್ವಾಸಕ್ಕೆ ಪಾತ್ರನಾದ. ಈತನ ಹೆಂಡತಿ ಬಚ್ಚಮ್ಮ. ಇವರಿಗೆ ಬಹುಕಾಲದವರೆಗೆ ಮಕ್ಕಳಾಗಲಿಲ್ಲ. ಶ್ರೀ ವೈಷ್ಣವ ಸಂಪ್ರದಾಯದ ಪ್ರಭಾವಕ್ಕೆ ಒಳಗಾಗಿದ್ದ ಈತ ತಿರುಪತಿಯ ತಿಮ್ಮಪ್ಪನಿಗೆ ಹರಕೆ ಹೊತ್ತ. ಹುಟ್ಟಿದ ಮಗುವಿಗೆ ತಿಮ್ಮಪ್ಪನೆಂದೇ ಹೆಸರಿಟ್ಟರು. ತಿಮ್ಮಪ್ಪ ಬೆಳೆದು ಪ್ರಬುದ್ಧನಾದ. ಸಾಹಿತ್ಯ ಅಲಂಕಾರ ಛಂದಸ್ಸು ಪುರಾಣಾದಿ ಶಾಸ್ತ್ರಗ್ರಂಥಗಳ ಜೊತೆಗೆ ಭಾಗವತಾದಿ ಧರ್ಮಗ್ರಂಥಗಳ ಅಧ್ಯಯನ ನಡೆಯಿತು; ಶಸ್ತ್ರಾಸ್ತ್ರಗಳ ಅಭ್ಯಾಸವೂ ಆಯಿತು. ರಣವೀರನೂ ಆದ. ತಿಮ್ಮಪ್ಪ ತಿಮ್ಮನಾಯಕನಾದ. ಪಂಪ, ರನ್ನ, ಜನ್ನರ ಹಾಗೆ ಒಬ್ಬ ಕಲಿ ಎನಿಸಿದ. ಇದು ತಿಮ್ಮಪ್ಪ ಅಥವಾ ತಿಮ್ಮನಾಯಕನ ಕತೆ. ಆದರೆ ಕನಕ ಅಥವಾ ಕನಕಪ್ಪನ ಕತೆ ಬೇರೆ.

ಈ ಹೆಸರಿಗೆ ಸಾಕಷ್ಟು ಪ್ರತ್ಯಕ್ಷ ಆಧಾರಗಳಿವೆ. ಕನಕದಾಸರು ಶಮ್ಮ ಮೋಹನ ತರಂಗಿಣಿ ಗ್ರಂಥದಲ್ಲಿ :

ಕೃತಿ ವೇಳ್ದ ಕನಕದಾಸೋತ್ತಮಾ ಕೇಳ್ದವ
ಳತಿ ಸುಜ್ಞಾನ ವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ

ಎಂದು ಹೇಳಿದ್ದಾರೆ. ಅಲ್ಲದೆ

ನೆಟ್ಟಗೆ ಕನಕದಾಸನ ಕಾವ್ಯದೊಳ್ ದೋಷ
ತಟ್ಟದು ತಪ್ಪಬೇಡ

ಎಂದೂ ಇದೆ.

ಕನಕದಳದಲಿ ಕಲೆತನೆಂಧ್ರೆ ಘೌಜು
ಕನಕುಮನಕಾಗುವುದು ಹರಿಯೆ

ಎಂಬ ಸ್ತುತಿಯಲ್ಲಿಯೂ ಕನಕನ ಹೆಸರುಗಳು ಕಂಡುಬರುತ್ತವೆ. ಆದ್ದರಿಂದ ಇದೇ ಅವರ ಅಧಿಕೃತವಾದ ಹೆಸರಿರಬೇಕು. ಅಲ್ಲದೆ ಕನಕದಾಸರ ಈ ಹೆಸರ ಸಮರ್ಥನೆಗೆ ಒಂದು ದಂತಕತೆಯೂ ಇದೆ:

ತಿಮ್ಮಪ್ಪ ಸಮರ್ಥ ದಣನಾಯಕನಾಗಿ ಆಳ್ವಿಕೆ ನಡೆಸುತ್ತಿದ್ದ. ಒಮ್ಮೆ ಆತ ಭೂಶೋಧನಾ ಕಾರ್ಯವನ್ನು ಕೈಗೊಂಡ. ಆಗ ಅವನಿಗೆ ವಿಪುಲವಾದ ಕನಕ (ಹೊನ್ನು) ದೊರೆಯಿತು. ಕನಕ ದೊರೆತುದರಿಂದ ಆ ವ್ಯಕ್ತಿಗೆ ಕೂಡ 'ಕನಕ' ಕನಕಪ್ಪ ಅಥವಾ ಕನಕನಾಯಕನೆಂದು ಹೆಸರು ಬಂತು. ಆದರೆ ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು ಕನಕನೆಂಬ ಹೆಸರು ಕನಕಗಿರಿ ಎನಿಸಿದ ತಿರುಮಲೆಯಿಂದಲೇ ಬಂದುದು ಎನ್ನುತ್ತಾರೆ. ಏನೇ ಇರಲಿ ಸಿಕ್ಕ ಹೊನ್ನನ್ನು ದೇವಾಲಯಗಳ ಜೀರ್ಣೋದ್ಧಾರ ಕಾರ್ಯಕ್ಕೆ ಬಳಸಿದರು. ಕೆಲವರು, ಅದೇ ಹಣದಿಂದ ಕನಕರು ಕಾಗಿನೆಲೆಯ ಆದಿಕೇಶವ ದೇವಾಲಯವನ್ನು ನಿರ್ಮಿಸಿದರು ಎಂದು ಹೇಳುತ್ತಾರೆ. ಪುರಂದರದಾಸರ ಕೀರ್ತನೆಗಳಲ್ಲಿ ಸಹ ಕನಕದಾಸರ ಹೆಸರಿದೆ.

ಹೀಗೆ ಕನಕರು ವೃತ್ತಿಯಲ್ಲಿ ವೀರದಣನಾಯಕರಾಗಿ ವಂಶ ಪಾರಂಪರ್ಯದಿಂದ ಬಂದ ಕಾರ್ಯವನ್ನು ನಿರ್ವಹಿಸುತ್ತಿದ್ದರೂ ಸಹ ಅವರ ಅಂತರಂಗವೇ ಬೇರೆಯಾಗಿತ್ತು. ಅವರ ಮನಸ್ಸು ಸಾಹಿತ್ಯ ಸಂಸ್ಕೃತಿ ಮತ್ತು ಭಗವದಾರಾಧನೆಯ ಕಡೆಗಿತ್ತು. ತೋಳ್ಬಲದಲ್ಲಿ ಏನೇ ಕಾಠಿಣ್ಯ ದರ್ಪಗಳಿದ್ದರೂ ಹೃದಯದಲ್ಲಿ ಮಾರ್ದವತೆ ಯಿತ್ತು. ಜನಕೋಟಿಯತ್ತ ಅಂತಃಕರಣ ಮಿಡಿಯುತ್ತಿತ್ತು. ಹೀಗಿರುವಾಗ ಕನಕನಾಯಕರು ರಣಾಂಗಣದಲ್ಲಿ ಶತ್ರುಗಳೊಡನೆ ಘೋರವಾದ ಯುದ್ಧ ಮಾಡಬೇಕಾದ ಪ್ರಸಂಗ ಒದಗಿಬಂತು. ವಿಜಯನಗರದ ಅರಸರುಗಳ ಕಾಲ ಯುದ್ಧಗಳ ಕಾಲ, ಆಗ ಕರ್ಣಾಟಕ ಸಾಮ್ರಾಜ್ಯ ಮುತ್ತು ರತ್ನಗಳನ್ನು ಅಳೆದು ಮಾರು ವಷ್ಟು ವೈಭವದಿಂದ ಕೂಡಿತ್ತಾದರೂ ಅಕ್ಕಪಕ್ಕದಲ್ಲಿ ಶತ್ರುಗಳ ಕಾಟ ಅಷ್ಟೇ ಹೆಚ್ಚಾಗಿತ್ತು. ಇಂತಹ ಸಂದರ್ಭಗಳಲ್ಲಿ ಅಧೀನ ಪಾಳೇಗಾರರೂ ದಣನಾಯಕರುಗಳು ಯುದ್ಧಕ್ಕೆ ಧಾವಿಸಿ ನಾಡ ರಕ್ಷಣೆಗಾಗಿ ಹೋರಾಡಬೇಕಾಗುತ್ತಿತ್ತು. ಸಹಜವೀರನಾಗಿದ್ದ ಕನಕ ನಾಯಕ ಕೂಡ ಹೀಗೆ ಯುದ್ಧದಲ್ಲಿ ಹೋರಾಡುತ್ತಿದ್ದಾಗ ಶತ್ರು ಗಳಿಂದ ಘಾತಿಸಲ್ಪಟ್ಟು ನೆಲಕ್ಕುರುಳಿದ. ನೆರವಿಗೆ ಯಾರೂ ಬರಲಿಲ್ಲ. ದಿಕ್ಕುತೋಚದೆ ಮೂರ್ಛೆ ಹೋದ. ಆಗ ಭಗವಂತ ಬಂದು ಉಪಚರಿಸಿದಂತೆ ಭಾಸವಾಯಿತು. ಭಗವತ್ ಸಂತೃಕೆ ಹಿಂದೆಂದೂ ಕಾಣದ ರೋಮಾಂಚನದ ಅನುಭವವನ್ನು ನೀಡಿತು. ಈ ಘಟನೆ ಕನಕನಾಯಕ–ಕನಕದಾಸರಾಗಿ ಪರಿವರ್ತನೆ ಹೊಂದುವ ಮಹಾ ಮಜಲಾಯಿತು. ವೀರನೊಬ್ಬನನ್ನು ವಿರಾಗಿಯನ್ನಾಗಿಸುವ ಪರಿವರ್ತನೆಯ ಘಟ್ಟವಾಯಿತು, ಕನಕರ ಅಂತರಂಗದ ಅಭೀಪ್ಸೆ ಯನ್ನು ಈಡೇರಿಸುವಲ್ಲಿ ಪ್ರೇರಕ ಬಿಂದುವಾಯಿತು. ಕನಕರ ಬಾಳ ಕೃತಕತೆಯನ್ನು ಅಳಿಸಿ ಅವರ ಸ್ವಾಭಾವಿಕ ಪ್ರಕೃತಿಗೆ

ಎಳೆದೊಯ್ದಿತು. ಮೇಲಿನ ಘಟನೆ ಕನಕದಾಸರ ಒಂದು ಕೀರ್ತನೆಯಲ್ಲಿಯೇ ಸ್ಪಷ್ಟವಾಗಿ ವ್ಯಕ್ತವಾಗಿದೆ.

ಸುದತಿ ಮಕ್ಕಳ ಮೋಹ ಮದವೇರಿ ನಾನಿರಲು
ಪದುಮಾಕ್ಷ ನೀ ಬಂದು ಪದೇ ಪದೇ ಸಾರಿದೆಯೋ
ಅರಿಗಳು ದಂಡೆತ್ತಿ ಬರಲು ನಾನವರೊಡನೆ
ಪರಿ ಪರಿ ಹೋರುತಿರಲು
ದುರುಳರೆನ್ನನು ಜಯಿಸಿ ಹರಿದಟ್ಟಿ ಬಂದೆನ್ನ
ಧರೆಗುರುಳಿಸಿದರೊ ಹರಿಯೆ

ಮುಂದೆ ಕನಕದಾಸರು ಹೆಂಡತಿ ಮನೆ ಮಠ ಅಧಿಕಾರ ಸರ್ವಸ್ವವನ್ನೂ ತೊರೆದು ಹರಿಯನ್ನು ನೆನೆಯುತ್ತ ಊರೂರು ತಿರುಗುತ್ತ ಹೊರಟರು. ಶ್ರೀ ಹರಿಯ ವಿವಿಧ ರೂಪಿನೆಲೆಗಳಾದ ತಿರುಪತಿ, ಬೇಲೂರು, ಉಡುಪಿ, ಕಾಗಿನೆಲೆ, ಹಂಪೆ ಮುಂತಾದ ಕಡೆಗಳಲ್ಲಿ ಸಂಚರಿಸಿದರು, ಭಿಕ್ಷಾನ್ನವುಂಡರು. ಈ ಅವಧಿಯಲ್ಲಿ ಅವರ ಹರಿನಾಮಸ್ಮರಣೆಯು ಹಾಡುಗಳೇ ಕೀರ್ತನೆಗಳಾದುವು. ಅಪಾರವಾದ ಲೋಕಾನುಭವದ ಅಭಿವ್ಯಕ್ತಿ ಮತ್ತು ಭಗವದ್ಭಕ್ತಿ ಕಾವ್ಯಸ್ವರೂಪವನ್ನು ಪಡೆದುಕೊಂಡವು. ಸಾಮಾಜಿಕ ಅನೈತಿಕ ನಿವಾರಣೆಗಾಗಿ ದುಡಿದರು. ಶುಚಿರ್ಜೀವನಕ್ಕೆ ಮಹತ್ವವನ್ನು ಕೊಟ್ಟರು. ಅಲ್ಲಿ ಇಲ್ಲಿ ಸುತ್ತಿ ಸುಳಿದು ಆತ್ಮಸಾಕ್ಷಾತ್ಕಾರವನ್ನು ಕಂಡುಕೊಳ್ಳುತ್ತ ಶ್ರೀ ಕೃಷ್ಣದೇವರಾಯರ ಪ್ರಭಾವೀ ಗುರುಗಳೆಂದು ಹೆಸರಾಗಿದ್ದ ಶ್ರೀ ವ್ಯಾಸಗುರುಗಳ ಮಠವನ್ನು ಸೇರಿದರು. ಅಲ್ಲಿ ಕನಕರ ಕೀರ್ತಿ ಮುಗಿಲುಮುಟ್ಟಿತು. ಅವರ ಕೀರ್ತನ ಸಾಹಿತ್ಯ ವಿಪುಲವಾಗಿ ಬೆಳೆಯಿತು. ಅವರ ಆಧ್ಯಾತ್ಮಿಕ ಹಸಿವಿಗೆ ಆಹಾರ ದೊರೆಯಿತು. ಮತ್ತೊಬ್ಬ ಮಹಾ ಸಂತ ಮತ್ತು ಕೀರ್ತನಕಾರರಾದ ಶ್ರೀ ಪುರಂದರದಾಸರ ಸಂಪರ್ಕ ಲಭಿಸಿತು. ಕನಕದಾಸರು

ಮತ್ತು ಪುರಂದರದಾಸರು ಕೀರ್ತನ ಸಾಹಿತ್ಯದ ಅಶ್ವಿನಿದೇವತೆಗಳು ಎಂದು ಖ್ಯಾತರಾದರು.

**ಕಾಲ**

ಕನಕದಾಸರು ಇದ್ದಿರಬಹುದಾದ ಕಾಲದ ಬಗ್ಗೆ ಸಹ ವಾದ ವಿವಾದಗಳಿವೆ; ಊಹಾಪೋಹಗಳಿವೆ. ದೊರೆತಿರುವ ಖಚಿತ ಆಧಾರಗಳು ತುಂಬಾ ಕಡಮೆ. ಕನಕದಾಸರ ಕೃತಿಯುಲ್ಲೆಲ್ಲಿಯೂ ಕಾಲದ ಪ್ರಸ್ತಾಪವಿಲ್ಲ. ಆದರೆ ಅವರ 'ಮೋಹನತರಂಗಿಣಿ'ಯಲ್ಲಿ

"ಉರಗಾಲಯುವ ಪೆಸರ್ವಡೆದವನ
ಮತ್ತೊಸ್ಸ್ಯೇದರ ಜಾತೆಯಾತ್ಮ ಸಂಭವನ
ವರ ಪುರಾಣಂಗಳ ಕನ್ನಡಿಸಿದ ಕವಿವರರ
ಕೊಂಡಾಡುವೆ ಮುದದಿ''

ಎಂದಿದೆ. ಇಲ್ಲಿ ಉರಗಾಲಯುದ ಪೆಸರ್ವಡೆದವನ ಎಂದರೆ ವಾಲ್ಮೀಕಿ ಎಂದೂ, ಮತ್ತೊಸ್ಸ್ಯೇದರ ಜಾತೆಯಾತ್ಮ ಸಂಭವನ ಎಂದರೆ ವ್ಯಾಸರೆಂದೂ ಅವರ ವರಪುರಾಣಗಳನ್ನು ಕನ್ನಡಿಸಿದ ಕವಿವರರು ಕುಮಾರವಾಲ್ಮೀಕಿ ಮತ್ತು ಕುಮಾರವ್ಯಾಸರೆಂದೂ ಅರ್ಥೈಸಬಹುದು. ಆದ್ದರಿಂದ ಕನಕದಾಸರು ಕುಮಾರವಾಲ್ಮೀಕಿ ಮತ್ತು ಕುಮಾರವ್ಯಾಸರ ತರುವಾಯುದವರು ಎಂದು ತಿಳಿಯುವುದಕ್ಕೆ ಆಸ್ಪದವಿದೆ. ಅಲ್ಲದೆ ಕನಕದಾಸರು ವಿಜಯುನಗರದ ಶ್ರೀ ಕೃಷ್ಣದೇವರಾಯುರ ರಾಜಗುರುಗಳೆಂದು ಹೇಳಲಾಗಿದ್ದ ವ್ಯಾಸರಾಯುರ ಶಿಷ್ಯರಾಗಿದ್ದವರು, ಪುರಂದರದಾಸರ ಸಮಕಾಲೀನರು. ಈ ಸಂಗತಿಗಳು ಕನಕದಾಸರು ಹದಿನಾರನೆಯು ಶತಮಾನಕ್ಕೆ ಸೇರಿದವರೆಂದು ತಿಳಿಯುಲು ಸಹಾಯುಕವಾಗಿವೆ.

ಮೋಹನ ತರಂಗಿಣಿಯುಲ್ಲಿ ದೊರೆಯುುವ ಮತ್ತೊಂದು ಆಧಾರವೆಂದರೆ 'ಪೆಟಲಂಬಿನವರ ಪಥಕದ ನಿರೂಪಣೆ'. ಪೆಟಲಂಬಿನವರು

ಎಂದರೆ ತುಘಾಕಿಯವರು ಎಂದರ್ಥ. ಇವರ ವಿಚಾರ ದಕ್ಷಿಣ ದೇಶದವರಿಗೆ ಗೊತ್ತಾದುದು ೧೫೬೦ ರಲ್ಲಿ ನಡೆದ ರಾಯಚೂರು ಯುದ್ಧದಲ್ಲಿ. ಇದಲ್ಲದೆ ಶ್ರೀ ರೈಸ್ ಅವರು ಸಂಪಾದಿಸಿರುವ ಶಿವಮೊಗ್ಗೆಯ ೮೫ ನೆಯ ಶಾಸನ ವ್ಯಾಸರಾಯರಿಗೆ ಸಂಬಂಧಿಸಿದೆ. ಅದು ಕ್ರಿ. ಶ. ೧೫೨೭ ರ ಕಾಲಕ್ಕೆ ಸೇರಿದ ಶಾಸನವಾಗಿದೆ. ಕನಕರು ಕನಕದಾಸರಾಗುವುದಕ್ಕೆ ಮೊದಲು ತಿಮ್ಮಪ್ಪನಾಯಕ ಎಂಬ ಹೆಸರಿನಿಂದ ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿ ಮಾಂಡಳಿಕರಾಗಿಯೋ, ಪಾಳೇಗಾರರಾಗಿಯೋ ಇಲ್ಲ ದಣನಾಯಕರಾಗಿಯೋ ಇದ್ದರೆನ್ನುವ ದಂತಕಥೆಗಳು ಚಾಲ್ತಿಯಲ್ಲಿವೆ. ಇವೂ ಸಹ ಕನಕರು ಹದಿನಾರನೆಯ ಶತಮಾನಕ್ಕೆ ಸೇರಿದವರೆಂಬ ಅಂಶಕ್ಕೆ ಪೂರಕವಾಗಿವೆ.

ಇದೂ ಅಲ್ಲದೆ ಮೋಹನ ತರಂಗಿಣಿಯಲ್ಲಿ ಬರುವ ರತಿ ಪ್ರದ್ಯುಮ್ನರ ಗೃಹಪ್ರವೇಶವು 'ಮಾಘ ಶುದ್ಧ ಪಂಚಮಿ ಬೃಹಸ್ಪತಿ ವಾರ' ಆಯಿತೆಂದೂ, ಅನಿರುದ್ಧನ ಹುಟ್ಟಿದ ದಿನ 'ಆನಂದ ಸಂವತ್ಸರ ಮಾಘ ಶುದ್ಧ ಪಂಚಮಿ ಆದಿವಾರ' ಎಂದೂ ಅದನ್ನು ಲೆಕ್ಕ ಹಾಕಿದರೆ ಶಾಲಿವಾಹನ 1476ಕ್ಕೆ (ಕ್ರಿ.ಶ. ೧೫೫೩ ೧೫೫೪) ಕ್ಕೆ ಸರಿಬರುತ್ತದೆಂದೂ ಗಣನೆಗೆ ತೆಗೆದುಕೊಳ್ಳುವವರಿದ್ದಾರೆ.[1] ಈ ಎಲ್ಲಾ ಆಧಾರಗಳಿಂದ ಕನಕದಾಸರು ಹದಿನಾರನೆಯ ಶತಮಾನಕ್ಕೆ ಸೇರಿದವರು ಎಂದು ಹೇಳಬಹುದಾಗಿದೆ.

**ಜಾತಿ**

ಕನಕದಾಸರು ತಮ್ಮ ಜಾತಿಯ ಬಗ್ಗೆ ನಿರ್ದಿಷ್ಟವಾಗಿ ಏನನ್ನೂ

---

1. ನೋಡಿ: ಬಿ. ಎಸ್. ಸಣ್ಣಯ್ಯ. ಕನಕದಾಸರ ಮೋಹನ ತರಂಗಿಣಿ ಸಂಗ್ರಹ, 1970, ಪು. ix.

ಹೇಳಿಲ್ಲ. "ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ ?" ಎಂದು ಸಾರಿರುವ ಅವರು ತಮ್ಮ ಕುಲದ ಬಗ್ಗೆ ಪ್ರಸ್ತಾಪಿಸುತ್ತಾರೆಂದು ಭಾವಿಸು ವುದು ಸಹ ಸರಿಯಲ್ಲ. ಕನಕದಾಸರು ದೊಡ್ಡ ಸಾಧಕರು, ಸಮಾಜ ಸುಧಾರಕರು, ಜಾತಿ ಮತಗಳಗೊಡವೆ ಬಿಟ್ಟವರು (ಜಾತ್ಯಾಂಧರ ನಡುವೆ ಸಿಕ್ಕಿ ನೊಂದವರು).

ಆದರೆ ಸಾಹಿತ್ಯ ಚರಿತ್ರೆಗಾಗಿ ವಿದ್ವಾಂಸರು ಈ ಬಗ್ಗೆ ಸಾಕಷ್ಟು ತಲೆ ಕೆಡಿಸಿಕೊಂಡಿದ್ದಾರೆ. ಕೀರ್ತನೆಗಳಲ್ಲಿ, ಇತರ ಕೃತಿಗಳಲ್ಲಿ ಸಿಕ್ಕ ಅಲ್ಪ ಸ್ವಲ್ಪ ಆಧಾರಗಳನ್ನೇ ಹೆಕ್ಕಿತೆಗೆದಿದ್ದಾರೆ.

ಈ ಪ್ರಕಾರ ಕನಕದಾಸರನ್ನು ಮೂರು ಜಾತಿಗಳಿಗೆ ಸೇರಿಸ ಲಾಗಿದೆ. ಅವರು ಕುರುಬ ಕುಲದವರೆಂದೂ, ಬೇಡ (ನಾಯಕ) ಜಾತಿಯವರೆಂದೂ ಕಬ್ಬಲಿಗ ಜಾತಿಯವರೆಂದೂ ಬೇರೆ ಬೇರೆ ಅಭಿಪ್ರಾಯಗಳಿವೆ.

## ಕನಕದಾಸರು ಕುರುಬರೆ ?

ಕನಕದಾಸರು ಕುರುಬ ಕುಲದವರೆಂದು ಹೇಳುವ ಆಧಾರಗಳು ಹೆಚ್ಚಾಗಿವೆ. ಅವರು ಹಾಲುಮತದ ಕುರುಬ[1]ರೆಂದೂ ಅಂಡೆ ಕುರುಬ[2]ರೆಂದೂ ಹೇಳುವವರು ಇದ್ದಾರೆ. "ನಾವು ಕುರುಬರು ನಮ್ಮ ದೇವರು, ಬೀರಯ್ಯ" ಎಂದು ಸ್ವಯಂ ಕನಕದಾಸರೇ ಹಾಡಿರುವುದು ಇದಕ್ಕೆ ಅತ್ಯುತ್ತಮ ತಳಹದಿಯಾಗಿದೆ. ಇಲ್ಲಿನ "ಬೀರ" "ವೀರ" ಎಂಬ ಸಂಸ್ಕೃತ ಪದದ ತದ್ಭವರೂಪ; ಈಶ್ವರ

---

1. ನೋಡಿ : ಬೇಲೂರು ಕೇಶವದಾಸರು, ಕರ್ಣಾಟಕ ಭಕ್ತ ವಿಜಯ.
2. ನೋಡಿ : ರ. ರಾ. ದಿವಾಕರ, ಮಹಾಕನಕದಾಸ ಸಂಸ್ಕರಣ (4) ಸಂಪುಟ—ಪು.3

ನಿಗಿರುವ ಹೆಸರುಗಳಲ್ಲಿ ಒಂದು. ಶಿವಾರಾಧಕರಾದ ಈ ಕುರು ಬರು ನಾಡಿನಾದ್ಯಂತ ಹರಡಿದ್ದರು. ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರ ಶ್ರೀ ವೈಷ್ಣವ ಧರ್ಮದ ಪ್ರಭಾವ ತುಂಬ ದಟ್ಟವಾಯಿತು. ವಿಜಯನಗರದ ದೊರೆಗಳೇ ಶ್ರೀ ವೈಷ್ಣವ ಪಂಥವನ್ನು ಅನುಸರಿಸಿದರು. ಹೀಗಿರುವಾಗ ಸಾಮಾನ್ಯ ನಾಡಿ ಗರು ಪರಿವರ್ತನೆ ಹೊಂದುವುದು ಅಥವಾ ಪ್ರಭಾವಕ್ಕೊಳಗಾಗು ವುದು ಆಶ್ಚರ್ಯದ ಸಂಗತಿಯಲ್ಲ. ಕುರುಬರು ತಿರುಪತಿ ತಿಮ್ಮಪ್ಪನ ಒಕ್ಕಲಾದರು. ಆದ್ದರಿಂದ ತಿಮ್ಮಪ್ಪನೆಂಬ ಹೆಸರನ್ನು ಶಿವಭಕ್ತರಾದವರು, ಇಟ್ಟುಕೊಳ್ಳುವುದಿಲ್ಲ ಎಂಬ ವಾದದಲ್ಲಿ ಹುರು ಳಿಲ್ಲ. ಒಂದು ಮುಖ್ಯವಾದ ಅಂಶವೆಂದರೆ ಕರ್ನಾಟಕದಲ್ಲಿ ಲಿಂಗಾ ಯಿತರು ಮತ್ತು ಬ್ರಾಹ್ಮಣರಲ್ಲಿ ಕೆಲವು ವರ್ಗದ ಜನರನ್ನು ಬಿಟ್ಟರೆ ಉಳಿದ ಶೂದ್ರ ಜನಾಂಗದವರಲ್ಲಿ ಎಲ್ಲ ದೇವರುಗಳನ್ನು ಯಾವುದೇ ತಾರತಮ್ಯವಿಲ್ಲದೆ ಆರಾಧಿಸುವ ಸಂಪ್ರದಾಯ ಕಂಡು ಬರುತ್ತದೆ. ಶೂದ್ರರಲ್ಲಿ ಏಕದೇವಾರಾಧನೆ ಇಲ್ಲದೆ ಇರುವುದ ರಿಂದ ಅವರು ಯಾವುದೇ ದೇವರ ಹೆಸರನ್ನು ತಮ್ಮ ಮಕ್ಕಳಿಗೆ ಇಡುತ್ತಿದ್ದರು. ಆದ್ದರಿಂದ ಅಪ್ಪಟ ಶೂದ್ರನಾದ ಕನಕನಿಗೆ ತಿಮ್ಮಪ್ಪ ಎಂದು ಹೆಸರಿಟ್ಟಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಕುರುಬರನ್ನು ಕನಕ ಜಾತಿಯವರೆಂದೇ ಕರೆಯಲಾಗುತ್ತಿದೆ. ಇವಕ್ಕೆ ಸಹಾಯವಾಗುವ ಮಾನವಶಾಸ್ತ್ರಜ್ಞರ ಹೇಳಿಕೆಯನ್ನು ಡಾ. ಜಿ. ವರದರಾಜರಾವ್ ಅವರು ಉದಾಹರಿಸಿದ್ದಾರೆ.[1] ಕುರುಬ

---

1. The Kuruba Caste is some times known by the name of Kanakajathiya-varu and it is said that the Kanakadas the famous devotee of Vishnu was a

ಜೀವನದ ಉಪಮಾನಗಳು ಅವರ ಕೃತಿಗಳಲ್ಲಿ ದೊರಕಿವೆ. ಮೇಲಿನ ಎಲ್ಲಾ ಆಧಾರಗಳಿಂದ ಕನಕದಾಸರು ಕುರುಬ ಜಾತಿಯವರೆಂದು ನಂಬಬಹುದಾಗಿದೆ.

## ಕನಕದಾಸರು ನಾಯಕರೆ?

ಕನಕದಾಸರ ಭಕ್ತಿ ಗೀತೆಗಳು ಎಂಬ ಕೃತಿಯನ್ನು ಸಂಪಾದಿಸಿರುವ ಬೆಟಗೇರಿ ಕೃಷ್ಣಶರ್ಮ ಮತ್ತು ಬೆಟಗೇರಿ ಹುಚ್ಚುರಾಯರು ಕನಕದಾಸರು ನಾಯಕ (ಬೇಡ) ಜನಾಂಗಕ್ಕೆ ಸೇರಿದವರೆಂದು ಅಭಿಪ್ರಾಯಪಡುತ್ತಾರೆ.[1] ಅವರ ಪ್ರಕಾರ: ಕಾಗಿನೆಲೆಗೆ ಸಮೀಪದಲ್ಲಿರುವ 'ಕುಮ್ಮೂರು' ಎಂಬ ಹಳ್ಳಿ ಕನಕರ ಜನ್ಮಸ್ಥಳ, ಇಲ್ಲಿಯ 'ದಾಸ' ಎಂಬ ಜಾತಿಯ ಜನರು ಕನಕದಾಸರ ವಂಶಸ್ಥರು. ಈ ಹಳ್ಳಿಯ ಕಿರು ಗುಡ್ಡದಮೇಲೆ ಕನಕರ ತಂದೆ ತಿರುಪತಿಯಿಂದ ತಂದು ಸ್ಥಾಪಿಸಿರುವ 'ತಿಮ್ಮ ಕೇಶವ' ದೇವರ ಗುಡಿ ಇದೆ. ಈ ದಾಸ ಜನರೇ ಇಲ್ಲಿಯ ಅರ್ಚಕರು. ಈ ದಾಸ ಜನಾಂಗದವರೇ ಬೇಡರು ಅರ್ಥಾತ್ ನಾಯಕರು. ಇವರಿಗೆ ದೇವಸ್ಥಾನದ ಇನಾಮಿನ ಹೊಲಗಳಿವೆ. ಅಲ್ಲದೆ ಈ ಸಂಪಾದಕ

---

man of this Community (-The Mysore Tribes and Castes 1931. H. V. Nanjundaiah and L. K. Anantha Krishna Iyer Vol.IV, (p. 24 & 27)

ಈ ಬಗ್ಗೆ ವಿವರವಾದ ಅಧ್ಯಯನಕ್ಕೆ ನೋಡಿ ಡಾ. ಜಿ. ವರದರಾಜರಾವ್, ಕನಕಕಿರಣ, ಕಾ. ತ. ಚಿಕ್ಕಣ್ಣ (ಸಂ.) 1982, ಪು. 1–25

1. ನೋಡಿ: ಬೆಟಗೇರಿ ಕೃಷ್ಣಶರ್ಮ ಮತ್ತು ಶ್ರೀ ಬೆಟಗೇರಿ ಹುಚ್ಚುರಾಯ, ಶ್ರೀ ಕನಕದಾಸ ಭಕ್ತಿ ಗೀತೆಗಳು.

ದ್ವಯರು ಕನಕರ ಮಂತದವರೆಂದು ಹೇಳಲಾದ ದಾಸರಿ ಪಂಗಡದವರ ವಿಷಯವನ್ನು ಸಂಗ್ರಹಿಸಿ ಇದಕ್ಕೆ ಸಮರ್ಥನೆ ಕೊಡುತ್ತಾರೆ.[1] ನಾಯಕ ಕುಲ ಎಂದರೆ ವಾಲ್ಮೀಕಿ ಕುಲ ಎಂದರ್ಥ. ಮೇಲಿನ ವಿಚಾರಗಳು ಚರ್ಚಾಸ್ಪದವಾಗಿವೆ. 'ತಿಮ್ಮ ಕೇಶವ' ದೇವರನ್ನು ಕಾಗಿನೆಲೆ ಬಳಿಯ ಕಿರುಗುಂಡ್ಡದ ಮೇಲೆ ಸ್ಥಾಪಿಸಿದವರು ಕನಕದಾಸರ ತಂದೆ ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಕನಕದಾಸರು ಈ ದಾಸರಿ ಪಂಗಡಕ್ಕೆ ಸೇರಿದವರು ಎಂದು ಹೇಳುವುದಕ್ಕೆ ಶಾಸನಗಳಾಗಲಿ, ತಾಮ್ರ ಪಟಗಳಾಗಲಿ, ಕೊನೆಗೆ ಯಾವುದೇ ಬಗೆಯ ಲಿಖಿತ ದಾಖಲೆಗಳಾಗಲಿ ಇಲ್ಲ. ಇದು ಸಂಪಾದಕ ದ್ವಯರಿಗೆ ದೊರೆತ ಹೇಳಿಕೆಯ–ಕೇಳಿಕೆಯ ಕತೆಗಳು; ಕಟ್ಟುಕತೆಗಳಾದರೂ ಆಶ್ಚರ್ಯವಿಲ್ಲ. ಈಗ ಕಂಡುಬರುವ ದಾಸ ಪಂಥಕ್ಕೂ ನಾಲ್ಕು ನೂರು ವರ್ಷಗಳ ಹಿಂದಿದ್ದ ಕನಕದಾಸರಿಗೂ ಸಂಬಂಧ ಕಲ್ಪಿಸುವ ನೈಜ ತಂತುಗಳಾವುವೂ ಇಲ್ಲ. ಆದ್ದರಿಂದ ಇದೊಂದು ಆಧಾರ ರಹಿತ ಅಭಿಪ್ರಾಯವೇ ಹೊರತು ವಾಸ್ತವಾಂಶವಾಗುವುದಿಲ್ಲ.

## ಕನಕರು ಕಬ್ಬಲಿಗರೆ ?

ಕನಕದಾಸರ ಒಡನಾಡಿಗಳಾಗಿದ್ದ ಪುರಂದರದಾಸರ ಒಂದು ಹಾಡಿನ ಆಧಾರದ ಮೇಲೆ ಕನಕದಾಸರು ಕಬ್ಬಲಿಗ ಜಾತಿಗೆ ಸೇರಿರಬಹುದೆ ಎಂಬ ಅಭಿಪ್ರಾಯವಿದೆ. ಆ ಹಾಡು ಹೀಗಿದೆ.

ಕನಕದಾಸನು ಕಬ್ಬಲಿಗನು ಎಂದು
ಅಣಕಿಸಿ ನುಡಿಬೇಡಿರಣ್ಣ ॥
ಜನರಂತೆ ನರನಲ್ಲ ತುಂಬುರನೀತನು
ಜನಕಜೆ ರಮಣನ ಪಾದಸೇವಕನು

---

1. ನೋಡಿ: ಜ್ಯೋತಿ ಹೊಸೂರ, ಕನಕದಾಸರ ಜೀವನ ವಿಚಾರ, ಕನಕಕಿರಣ, 1982, ಕಾ. ತ. ಚಿಕ್ಕಣ್ಣ (ಸಂ) ಪು. 37.

ಈ ಹಾಡಿನ ಬಗ್ಗೆ ಜ್ಯೋತಿ ಹೊಸೂರರು ಎರಡು ಬಗೆಯ ಭಿನ್ನ ನಿಲುವನ್ನು ತಾಳುತ್ತಾರೆ. ಒಂದು 'ಕಬ್ಬಲಿಗ' ಎಂಬುದು ಒಂದು ಸ್ವತಂತ್ರ ಜಾತಿಯಲ್ಲ. ಅದು ಕುರುಬ ಜನಾಂಗದಲ್ಲಿಯೇ ಒಂದು ಪಂಗಡ. ಎರಡನೆಯದಾಗಿ ಪುರಂದರದಾಸರ ಈ ಹಾಡು ಪ್ರಕ್ಷಿಪ್ತ ಎಂದು.[1]

ಮೇಲಿನ ಎಲ್ಲಾ ಸಂಗತಿಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ, ವಾದ ವಿವಾದಗಳನ್ನು ಗಮನಿಸಿದಾಗ ಕನಕದಾಸರು ಕುರುಬ ಕುಲದವರು ಎಂದು ಹೇಳುವುದಕ್ಕೆ ಆಧಾರಗಳು ಹೆಚ್ಚಾಗಿವೆ. ಕನಕರಾದರೊ 'ಆತ್ಮ ಯಾವ ಕುಲ ? ಜೀವ ಯಾವ ಕುಲ?' ಎಂದು ಪ್ರಶ್ನಿಸುತ್ತ ಕುಲಾತೀತರಾಗಿ ನಡೆದವರು. ಎಲ್ಲ ಬಂಧನಗಳನ್ನು ದಾಟಿ ಭಕ್ತ ಕುಲ ಸೇರಿದವರು.

## ಕನಕರ ಮೇಲೆ ಧಾರ್ಮಿಕ ಪ್ರಭಾವ ?

ಕನಕದಾಸರು ಜಾತ್ಯಾತೀತರಾಗಿದ್ದರೂ ಸಹ ಅವರ ಮೇಲೆ ಒಂದೆರಡು ಧಾರ್ಮಿಕ ಪ್ರಭಾವಗಳಿರುವುದು ಮೇಲುನೋಟಕ್ಕೆ ಕಂಡುಬರುತ್ತದೆ. ಅವರು ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತವನ್ನು ಅನುಸರಿಸಿದ್ದರೆಂದು ಹೇಳುವವರಿದ್ದಾರೆ. ಕನಕರು ತಮ್ಮ ಮೋಹನ ತರಂಗಿಣಿ ಎಂಬ ಸಾಂಗತ್ಯ ಕೃತಿಯಲ್ಲಿ "ಶ್ರೀ ಮದ್ಗುರುರಾಯ ದುರಿತ ವಿಜೇಯ ದುಷ್ಕಾಮ ವಿಚ್ಛೇದವಾಹ್ಲಾದ, ತಾಮಸ ಗುಣನಾಶ ಸಾತ್ವಿಕೋಲ್ಲಾಸ ಶ್ರೀ ರಾಮಾನುಜ ಮುನಿ ಶರಣು" ಎಂದು ಸ್ತುತಿಸಿರುವುದನ್ನು—ಇನ್ನು ಕೆಲವು ಮಾತುಗಳನ್ನು ಇದಕ್ಕೆ ಆಧಾರವಾಗಿ ಕೊಡಲಾಗಿದೆ.

---

1. ಅದೇ.

"ತಾತಾಚಾರಿಯರಡಿಗೆರಗುವೆನು" ಎಂಬ ನುಡಿಗಳನ್ನು ಇದಕ್ಕೆ ಪೂರಕವಾಗಿ ಉದಾಹರಿಸಲಾಗಿದೆ.

ಆದರೆ ಕನಕರು ದ್ವೈತ ಮತಾವಲಂಬಿ ಎಂದು ಹೇಳುವ ಒಂದು ಪರಂಪರೆ ಪ್ರಬಲವಾಗಿಯೇ ಇದೆ. ಅದಕ್ಕೆ ಒದಗಿಸಿರುವ ಕಾರಣ ಗಳು ಈ ಕೆಳಗಿನಂತಿವೆ.

ಕನಕದಾಸರ ಸಾಹಿತ್ಯದಲ್ಲಿ ವಾಯುದೇವರಿಗೆ ಮಹತ್ವದ ಸ್ಥಾನ ಇದೆ. ಹರಿಭಕ್ತಿಸಾರದ ಒಂದು ಪದ್ಯದಲ್ಲಿ "ವೀರರಾವಣ ನೊಡನೆ ವೀರರಗ್ಗದ ಕಪಿಗಳವರೊಳು ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲ್ಲಿ ಸೇರಿಸಿದೆ" ಎಂದಿದೆ. ಅಲ್ಲದೆ:

> ಮಧ್ವ ಶಾಸ್ತ್ರವನೆಲ್ಲ ಸಜ್ಜನರಿಗೊರೆದಗೆ
> ಮುದ್ದು ನೆಲೆಯಾದಿ ಕೇಶವನ ಭಜಕರಿಗೆ

ಎಂಬ ಸ್ತುತಿಯಿದೆ. ಈ ಆಧಾರಗಳಿಂದ ಅವರು ದ್ವೈತಮತಾವ ಲಂಬಿ ಎಂದಿದ್ದಾರೆ.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕನಕದಾಸರು ತಮ್ಮ ಯಾವ ಗೀತೆಯಲ್ಲಿಯೂ ಮತೋದ್ದೇಶವನ್ನು ತಂದಿಲ್ಲ. ಸಾಧ್ಯವಾದ ಕಡೆಗಳಲ್ಲೆಲ್ಲ ಅವರ ಸಾಹಿತ್ಯದಲ್ಲಿ ಮತದ ಖಂಡನೆ ಯಿದೆ. ವ್ಯಕ್ತಿ ಪ್ರೇಮದಿಂದ ಉಂಟಾದ ಸ್ತುತಿಗಳನ್ನು ಆಧರಿಸಿ ಯಾಗಲಿ, ಸಾಹಿತ್ಯದಲ್ಲಿ ಅಂತರ್ಗತವಾದ ವಾಯು, ಆಂಜನೇಯ ಮುಂತಾದ ಹೆಸರುಗಳಿಂದಾಗಲಿ ಕನಕದಾಸರನ್ನು ಧರ್ಮವೊಂದಕ್ಕೆ ಕಟ್ಟಿಹಾಕುವುದು ಸೂಕ್ತವಲ್ಲವೆನಿಸುತ್ತದೆ. ಕೇವಲ ತರ್ಕಕ್ಕೆ ಸರಿ ತೋರುವುದು ಸತ್ಯವೆನಿಸುವುದಿಲ್ಲ. ಕನಕದಾಸರು ಪರಿವ್ರಾಜಕ ಪ್ರವೃತ್ತಿಯವರು. ತಂಬೂರಿಯನ್ನು ಹಿಡಿದು ಊರೂರು ತಿರುಗುತ್ತ ಹರಿಭಜನೆ ಮಾಡುತ್ತ ಮುಮುಕ್ಷುಗಳಾಗಿ ನಡೆದವರು. ಆತ್ಮೋದ್ಧಾರಕ್ಕೂ ಲೋಕೋದ್ಧಾರಕ್ಕೂ ದುಡಿದವರು. ಬದುಕಿ

ನುಂದ್ದಕ್ಕೂ ತಮ್ಮನ್ನು ಇಲ್ಲಗೈಯುತ್ತ ಆಧ್ಯಾತ್ಮಗಿರಿಗೆ ಏರಿದವರು. ಉನ್ನತವಂಟ್ಟದ ಹರಿದಾಸರಾದ ಇವರು ಕೀರ್ತನ ಸಾಹಿತ್ಯದ ಒಂದು ಮಹಾ ಶಿಖರ ಎಂದು ನಿರ್ವಿವಾದವಾಗಿ ಹೇಳಬಹುದು.

## ೨. ಕನಕರ ಕಾಗಿನೆಲೆ

ಕನಕದಾಸರನ್ನು ಬಾಡದವರೆಂದೂ, ಕಾಗಿನೆಲೆಯವರೆಂದೂ ಬೇರೆ ಬೇರೆಯಾಗಿ ಕರೆಯಲಾಗುತ್ತಿದೆ. ಅವರ ಸಾಹಿತ್ಯದ ಅಂಕಿತಗಳಲ್ಲಿ ಬಾಡದಾದಿಕೇಶವನೆಂದೂ, ಕಾಗಿನೆಲೆಯಾದಿಕೇಶವನೆಂದೂ ಬೇರೆ ಬೇರೆ ರೂಪಗಳಿರುವುದು ಇದಕ್ಕೆ ಕಾರಣವಾಗಿದೆ. ಹಾಗಾದರೆ ಕನಕದಾಸರ ಊರು ಯಾವುದು ? ಬಾಡವು ಕನಕದಾಸರ ಮೂಲ ಸ್ಥಳ (ಹುಟ್ಟೂರು)ವೆಂದೂ, ಕಾಗಿನೆಲೆಯು ತರುವಾಯದ ಅವರ ಸಾಧನ ಕ್ಷೇತ್ರವೆಂದೂ ವಿದ್ವಾಂಸರ ಅಭಿಪ್ರಾಯವಿದೆ. ಕನಕರು ಆರಂಭದ ದಿಸೆಯಲ್ಲಿ ರಚಿಸಿದ ನಳಚರಿತ್ರೆ, ರಾಮಧಾನ್ಯ ಚರಿತ್ರೆ, ಹರಿಭಕ್ತಿಸಾರ ಕೃತಿಗಳಲ್ಲಿ—ಕಾಗಿನೆಲೆಯ ಕನಕದಾಸ ಎಂಬ ಹೆಸರಾಗಲಿ, ಕಾಗಿನೆಲೆಯ ಆದಿಕೇಶವ ಎಂಬ ಅಂಕಿತವಾಗಲಿ ಕಂಡು ಬರುವುದಿಲ್ಲ. ಆದರೆ ಅದಕ್ಕೆ ಬದಲಾಗಿ ವರಪುರದ ಚೆನ್ನಿಗರಾಯ, ವರಪುರದ ಕೇಶವ–ಎಂಬ ಅಂಕಿತಗಳು ಕಂಡುಬಂದಿವೆ. ಈ ವರಪುರ ಯಾವುದೆಂಬುದು ಸರಿಯಾಗಿ ತಿಳಿದಿಲ್ಲ. ಚೆನ್ನಕೇಶವ ಸ್ವಾಮಿಯ ದೇವಾಲಯ ಇರುವ ಹಾಸನ ಜಿಲ್ಲೆಯ ಬೇಲೂರು ಇರಬಹುದೆ ? ಎನ್ನುವವರೂ ಇದ್ದಾರೆ. ಕಾಗಿನೆಲೆಯಿಂದ ಒಂದೂವರೆ ಮೈಲಿ ದೂರದಲ್ಲೊಂದು ಚೆನ್ನಕೇಶವಸ್ವಾಮಿಯ ಗುಡಿ ಇರುವುದರಿಂದ ಕಾಗಿನೆಲೆಯ ಈ ಪ್ರದೇಶವೇ ವರಪುರವಾಗಿರಬಹುದೇ ಎಂಬ ವಾದಕ್ಕೂ ಆಸ್ಪದವಿದೆ.

ಬಾಡದಾದಿ ಕೇಶವ—ಕಾಗಿನೆಲೆಯ ಆದಿಕೇಶವ ಎಂಬ ಅಂಕಿತ

ಗಳು ಕನಕದಾಸರ ಭಕ್ತಿಗೀತೆಗಳಲ್ಲಿ ಕಂಡುಬರುತ್ತವೆ. ಮೋಹನ ತರಂಗಿಣಿಯಲ್ಲಿ ಸಹ 'ಕೃತಿಗೆ ಕನಕನು ಕಾಗಿನೆಲೆಯಾದಿ ಕೇಶವ' ಎಂದಿದೆ. ಆದ್ದರಿಂದ ತಮ್ಮ ಆರಂಭದ ಕೃತಿಗಳಲ್ಲಿ ಕನಕರು 'ಬಾಡದಾದಿ ಕೇಶವ' ಎಂದೂ, ತರುವಾಯದ ಕೃತಿಗಳಲ್ಲಿ ಕಾಗಿನೆಲೆಯಾದಿ ಕೇಶವ ಎಂದೂ ಸ್ತುತಿಸಿರಬಹುದೆಂದು ಕಾಣುತ್ತದೆ. ಬಾಡದ ಆದಿಕೇಶವ ಮೂರ್ತಿಯನ್ನು ಕಾಗಿನೆಲೆಗೆ ತಂದು ಕನಕರು ಪ್ರತಿಷ್ಠಾಪಿಸಿದರು ಎಂಬ ಪ್ರಚಲಿತ ಸಂಗತಿಯನ್ನು ನಂಬುವುದಾದರೆ ಇಲ್ಲಿನ ಸಮಸ್ಯೆಗೆ ಸಾಕಷ್ಟು ಪರಿಹಾರ ದೊರಕುತ್ತದೆ. ಬಾಡ ಮತ್ತು ಕಾಗಿನೆಲೆ ಎರಡೂ ಧಾರವಾಡ ಜಿಲ್ಲೆಗೆ ಸೇರಿದ ಸಮೀಪ ಸ್ಥಳಗಳು. ಬಾಡ ಗ್ರಾಮವು ಬಂಕಾಪುರಕ್ಕೆ ಒಂದು ಹರಿದಾರಿ ಮಾತ್ರ ಇದೆ. ಕನಕದಾಸರು ತಮ್ಮ ಜೀವನದ ಬಹುಪಾಲನ್ನು ಕಾಗಿನೆಲೆಯಲ್ಲಿ ಕಳೆದಿರುವುದಕ್ಕೆ ಸಾಕಷ್ಟು ಕಾರಣಗಳಿವೆ. ಅವರು ಕಾಗಿನೆಲೆಯ ಪ್ರಾಂತ್ಯವನ್ನು ಆಳಿದರು ಎಂಬುದಕ್ಕೆ ಐತಿಹಾಸಿಕ ಆಧಾರಗಳನ್ನು ಶ್ರೀ ತಲ್ಲೂರರಾಯನಗೌಡ ಪಾಟೀಲರು ಒದಗಿಸುತ್ತಾರೆ[1]: ಕನಕದಾಸರು ಕಾಗಿನೆಲೆಯನ್ನು ಅಪಾರವಾಗಿ ಪ್ರೀತಿಸುವುದಕ್ಕೆ ಅಲ್ಲಿ ಮೂರು ಮುಖ್ಯ ಕಾರಣಗಳಿವೆ :

(೧) ಅವರ ಇಷ್ಟದೈವವಾದ ಆದಿಕೇಶವ

(೨) ಅಪೂರ್ವವಾದ ಪ್ರಕೃತಿ ಸೌಂದರ್ಯ

(೩) ಆ ಕಾಲಕ್ಕಾಗಲೆ ಹೆಸರಾಂತ ಧಾರ್ಮಿಕ ಕೇಂದ್ರ

ಕಾಗಿನೆಲೆ ಮಲೆನಾಡಿನ ಸರಹದ್ದಿನಲ್ಲಿರುವ ಮನಮೋಹಕ ಸ್ಥಳ. ತೆಂಗು ಮತ್ತು ಬಾಳೆಯ ತೋಟಗಳಿಂದಲೂ, ಮಾವಿನ ತೋಪುಗಳಿಂದಲೂ ಕಬ್ಬು ಮತ್ತು ಭತ್ತದ ಗದ್ದೆಗಳಿಂದಲೂ ಆವೃತ

---

1. ನೋಡಿ: ಶ್ರೀ ತಲ್ಲೂರ ರಾಯನಗೌಡಪಾಟೀಲ, ಕಾಗಿನೆಲೆಯ ಐತಿಹಾಸಿಕ ಹಿನ್ನೆಲೆ, ಮಹಾತ್ಮ ಕನಕದಾಸ ಪ್ರಶಸ್ತಿ, ೧೯೬೫, ಪು. ೧೪೯

ವಾಗಿರುವ ಈ ಪ್ರದೇಶ ಇಂದಿಗೂ ತನ್ನ ಪ್ರಾಕೃತಿಕ ರಮಣೀಯತೆ ಯನ್ನು ಕಾಯ್ದುಕೊಂಡಿದೆ. ಸ್ವಯಂ ಕನಕದಾಸರೇ ಇದನ್ನು ಹೃದಯ ತುಂಬಿ ಬಣ್ಣಿಸಿದ್ದಾರೆ. ಶಾಸನಗಳಲ್ಲಿ ಸಹ ಇದರ ಸೊಬಗು ಅಭಿವ್ಯಕ್ತವಾಗಿದೆ.

ಸಿರಿನೆಲೆ ಗುಣದನೆಲೆ ಭಾ।
ಸುರ ಕೀರ್ತಿನೆಲೆ ವಿವೇಕ ವಿಭವದ ನೆಲೆ ವಿ
ಸ್ತರಿಪ ಜಯವಧುಗೆ ನೆಲೆಯೆನೆ
ಕರವೆಸಗುಂ ಕಾಗಿನೆಲೆ ಧರಶ್ರೀ ತಳದೊಳ್

ಎಂದು ಕಾಗಿನೆಲೆಯು ಚಾಲುಕ್ಯ ವಿಕ್ರಮಾಂಕನ ಶಾಸನದಲ್ಲಿ ವರ್ಣಿತ ವಾಗಿದೆ. ಅಲ್ಲದೆ :

ಸುರನಿಧಿಯುಂ ಪಳಂಚಲೆವ ಪೆರ್ಗೆರೆ ಚೆಲ್ವಿಡಿದಿರ್ದನಂದನಂ
ನಿರುಪಮವಾಗಿ ಕತ್ತಲಿಸುತ್ತಿಪ್ಪೆಲೆವಳ್ಳಿ ಮಡಲ್ತು ರಂಜಿಪಾ
ಸುರಗಿಯನಾಗ ನಾಗ ಕುಸುಮಂಗಳ ಪುಷ್ಪಲತಾ ಗೃಹಂ ಸವಿ
ಸ್ತರವೆಸೆದೊಪ್ಪೆ ಕಾಗಿನೆಲೆ ಶೋಭೆಗೆ ತಾಯ್‌ನೆಲೆಯಾಗಿ ರಂಜಿಕುಂ

ಎಂದು ಚಾಲುಕ್ಯರ ಶಾಸನದಲ್ಲಿ ಉಕ್ತವಾಗಿದೆ. ಜತೆಗೆ :

ದಳಿತಾಂಭೋಜ ಪ್ರತತಿಯಿಂದುದ್ಯಾನ ಸಂದೋಹದಿಂ
ಫಳಭಾರಾನ್ವಿತ ರಮ್ಯಶಾಳಿವನದಿಂ ನೀಳಾಭ್ರ ಸುಂಡಿ ಸಂ
ಕುಳದಿಂ ಸುತ್ತಿದ ಪೂರ್ಣವಾರಿ ಪರಿಖಾ ವಿಭ್ರಾಜಿಯಿಂ ದೀರ್ಘಿಕಾ
ವಳಿಯಿಂ ಕಣ್ಗೆಸೆದಿಂತುಕಾಗಿನೆಲೆ(ನಿ)ತ್ಯಾನೀಕದಿಂದೊಪ್ಪುಗುಂ

* * * *

ಬಳಸಿದ ಕೋಟೆ ಶೂದ್ರನಿಕೇತನದಿಂ ಗಣಿಕಾನಿವಾಟ ಸಂ
ಕುಳದ ವಿಳಾಸದಿಂ ದ್ವಿಜನಿವಾಸ ಕದಂಬಕದಿಂ ವಣಿಗ್ಗೃಹಾ
ವಳಿಯಿನುದಾತ್ತ ದೇವಭವನಂಗಳ ತಿಂತಿಣಿಯಿಂ ಶೋಭೆಯುಂ
ತಳೆದು ಪೊದಳ್ದು ಕಾಗಿನೆಲೆ ಸಂತತವಿಂತೆಸೆದೊಪ್ಪಿ ತೋರುಗುಂ

ಎಂದು ತ್ರಿಭುವನ ಮಲ್ಲನ ಶಿಲಾಶಾಸನದಿಂದ ತಿಳಿದುಬರುತ್ತದೆ.

ಇದರಿಂದ ಕಾಗಿನೆಲೆಯ ವೈಭವ, ಸಂಪತ್ತು, ನಿಸರ್ಗ ಸೌಂದರ್ಯ, ಐತಿಹಾಸಿಕ ಹಿರಿಮೆಗಳು ಅಧಿಕೃತವಾಗಿ ತಿಳಿದುಬರುತ್ತವೆ.

ಕಾಗಿನೆಲೆ ಈಗಿನ ಹಾಗೆ ಒಂದು ಹಾಳೂರಲ್ಲ. ಗತಿಸಿದ ಒಂದು ಐತಿಹಾಸಿಕ ಪಟ್ಟಣ; ಆಗ ಇದರ ಹೆಸರು ಕಾಗಿನೆಲ್ಲಿ; ಬರುಬರುತ್ತಾ ಅದು ಕಾಗಿನೆಲೆಯಾಯಿತು. "ಕಾಗಿನೆಲೆಯು ಬುನಾದಿಯಿಂದ ಬಂದಿರುವ ಪ್ರಾಚೀನ ಪಡಿಮೂಲೆಯ ಮಂಡಲ; ಒಂದು ಪರಗಣೆಯಾಗಿ ಅನೇಕ ಗ್ರಾಮಗಳನ್ನೊಳಗೊಂಡ ಭದ್ರ ಕೋಟೆಯ ಸ್ಥಳವಾಗಿದ್ದಿತು. ಈಗ ಈ ಸ್ಥಳದಲ್ಲಿ ೧೫ ಶಿಲಾಶಾಸನ ಗಳುಂಟು, ೧೦ ಪುರಾತನ ದೇವಾಲಯುಗಳುಂಟು. ಕೇಂದ್ರ ಸರ್ಕಾರದ ಶಿಲಾಶಾಸನ ಇಲಾಖೆಯುವರು ಕ್ರಿ.ಶ. ೧೯೩೩–೩೪ರಲ್ಲಿ ಹಾವೇರಿ ತಾಲೂಕಿನ ಶಾಸನಗಳನ್ನು ಸರ್ವೆ ಮಾಡಿದಾಗ ಕಾಗಿನೆಲ್ಲಿ ಯಲ್ಲಿ ಅವರಿಗೆ ದೊರೆತ ಹನ್ನೆರಡು ಕಲ್‌ಬರಹಗಳನ್ನು ಪರಿಶೀಲಿಸಿ ಸಾರಾಂಶಗಳನ್ನು ಪ್ರಕಟಿಸಿದ್ದಾರೆ. ಕೆಲವು ಶಾಸನಗಳು ಸ್ಪಷ್ಟವಾಗಿವೆ. ಕೆಲವನ್ನು ಇನ್ನೂ ಖಚಿತಗೊಳಿಸಬೇಕಾಗಿದೆ. ಶ್ರೀ ಕಟ್ಟೀ ಶೇಷಾ ಚಾರ್ಯರ ಅಭಿಪ್ರಾಯದಲ್ಲಿ "ಕಾಗಿನೆಲೆಯು ಬನವಾಸಿ ದೇಶಕ್ಕೆ ಒಳ ಪಟ್ಟಿತ್ತೆಂದು ತೋರುತ್ತದೆ. ಬನವಾಸಿಯು ಸನ್ನಿಚ್ಛಾಸಿರ ನಾಡು. ಮೊದಲಿನಿಂದ ಕದಂಬರಿಗೆ ನಡೆದು ಬಂದುದು. ಕಾಗಿನೆಲೆಯು ಪನ್ನೆರಡರ ಪಟ್ಟಣ"[1]. ಕದಂಬರನ್ನು ಗೆದ್ದ ಚಾಲುಕ್ಯರು ಕೆಲವು ಕಾಲ ಬನವಾಸಿಯುನ್ನು ದರ್ಪದಿಂದ ಆಳಿದರು; ಮತ್ತೆ ಕೆಲವು ಕಾಲ ಅದರ ಒಡೆತನ ದೇವಗಿರಿಯ ಯಾದವರಿಗೆ ಸೇರಿತ್ತು. ಕಳಚೂರಿಯರು ಸಹ ಕಾಗಿನೆಲೆಗಾಗಿ ಹೋರಾಟ ಮಾಡಿದ ಅಂಶ ಗಳು ಇತಿಹಾಸದಲ್ಲಿ ದೊರೆಯುತ್ತವೆ. ಆದರೆ ಅದರಾಚೆಗಿನ

1. ಶ್ರೀ ತಲ್ಲೂರರಾಯನಗೌಡ ಪಾಟೀಲ, ಕಾಗಿನೆಲೆಯ ಐತಿಹಾಸಿಕ ಹಿನ್ನೆಲೆ, ಮಹಾತ್ಮ ಕನಕದಾಸ ಪ್ರಶಸ್ತಿ, ೧೯೬೫, ಪು. ೧೫೦

ಚರಿತ್ರೆ ತುಂಬಾ ಅಸ್ಪಷ್ಟ. ೮ನೆಯ ಶತಮಾನದಲ್ಲಿ ಇದು ರಾಷ್ಟ್ರಕೂಟರು ಮತ್ತು ಕದಂಬರ ಆಳ್ವಿಕೆಗೂ, ೧೦–೧೧ನೆಯ ಶತಮಾನದಲ್ಲಿ ಗಂಗರು ಮತ್ತು ಚಾಳುಕ್ಯರ ಆಳ್ವಿಕೆಗೂ ಒಳಪಟ್ಟಿತ್ತು. "ವಿಜಯನಗರದವರ ಮಾಂಡಲೀಕತ್ವದಲ್ಲಿ ಕಾಗಿನೆಲ್ಲಿಯು ಒಂದು ಪರಗಣೆಯಾಗಿ, ಸುಭೆಯಾಗಿದ್ದಿತೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಅವಧಿಯಲ್ಲಿಯೇ ಕನಕನು ಢಣಾಯಕನಾಗಿ ವಿಜಯನಗರ ಮಾಂಡಲೀಕನಾಗಿದ್ದನು. ಕ್ರಿ.ಶ. ೧೫೭೪ರಲ್ಲಿ ವಿಜಾಪುರದ ಸುಲ್ತಾನರು ಗೆದ್ದು–ಈ ಪರಗಣೆಯನ್ನು ಬಂಕಾಪುರಕ್ಕೆ (ಆಗ ಪ್ರಾಂತವಾಗಿತ್ತು) ಸೇರಿಸಿದ್ದಿರಬೇಕು. ವಿಜಾಪುರದ ದಂಡನಾಯಕನಾಗಿದ್ದ ಮುಸ್ತಾಫಖಾನನ ಹಲ್ಲೆಯಿಂದ ಇಲ್ಲಿನ ಕೋಟೆ ಕೊತ್ತಳಗಳು ವಿಶೇಷ ಘಾಸಿಯಾಗಿದ್ದಂತೆ ತೋರುತ್ತದೆ. ಬರಬರುತ್ತ ಸವಣೂರು ನವಾಬರ ಪೂರ್ವಿ ಅಬ್ದುಲ್ ಕರೀಮ್‌ಖಾನರ ವಶಕ್ಕೆ ಬಂದಿತು. ಮುಂದೆ ಮೊಗಲರ, ವಿಜಾಪುರದವರ, ಮರಾಠಾ ಬ್ರಿಟಿಷರ ವಿಸ್ತರಣೆಯಲ್ಲಿ ಕಾಲಕ್ರಮೇಣ ದಾಳಿಗಳಿಗೆ ಸಿಕ್ಕು ರಾಜಕೀಯ ಸಾಮಾಜಿಕ ಒತ್ತಡಗಳಿಗೆ ಈಡು ಆಯಿತು."[1] ಮುಸ್ಲಿಮರ ದಾಳಿಗೆ ತುತ್ತಾಗುವುದಕ್ಕೆ ಪೂರ್ವದಲ್ಲಿ ಕಾಗಿನೆಲೆ ಸರ್ವಧರ್ಮ ಸಮನ್ವಯದ ಒಂದು ಸಾಂಸ್ಕೃತಿಕ ಕೇಂದ್ರವಾಗಿದ್ದಂತೆ ಕಂಡು ಬರುತ್ತದೆ. ಜೈನ, ಶೈವ, ವೈಷ್ಣವ ದೇವಾಲಯಗಳು ಅಲ್ಲಿದ್ದವು. ಲಕ್ಷ್ಮೀನರಸಿಂಹ, ಆದಿಕೇಶವ, ಕಾಳಹಸ್ತೇಶ್ವರ, ವೀರಭದ್ರ, ಸೋಮೇಶ್ವರ, ಬ್ರಹ್ಮೇಶ್ವರ, ಸಂಗಮೇಶ್ವರ, ಬಸವಣ್ಣ ಮತ್ತು ಆದಿಶಕ್ತಿ ದೇವಾಲಯಗಳ ನೆಲೆ ಆದಾಗಿತ್ತು. ಬಹುಶಃ ಶ್ರೀ ಕೃಷ್ಣದೇವರಾಯರ ಸರ್ವಮತ ಸಹಿಷ್ಣುತೆಗೆ ಅವನ ಅಧೀನ ಪಾಳೆಯಗಾರರೂ ಬದ್ಧರಾಗಿದ್ದರು ಎಂಬುದಕ್ಕೆ ಇದು ರುಜುವಾತಾಗಿದೆ.

---

1. ಅದೇ, ಪು. ೧೫೧

ಕನಕದಾಸರ ಆರಾಧ್ಯದೈವವಾದ ಆದಿಕೇಶವ ಇರುವ ದೇವಾಲಯವನ್ನು ನರಸಿಂಹ ಆದಿಕೇಶವ ದೇವಾಲಯ ಎಂದು ಕರೆಯಲಾಗುತ್ತಿದೆ. ಏಕೆಂದರೆ ಒಂದೇ ಪ್ರಾಕಾರದೊಳಗೆ ಎರಡು ದೇವ ಮಂದಿರಗಳಿವೆ. ಒಂದು ನರಸಿಂಹ ದೇವಾಲಯ. ಇದರ ಎಡ ಭಾಗಕ್ಕೆ ಹತ್ತು ಅಡಿಯ ಅಂತರದಲ್ಲಿ ಆದಿಕೇಶವ ದೇವಾಲಯವಿದೆ. ಇಲ್ಲಿ ಆದಿಕೇಶವ ಸ್ವಾಮಿಯ ೧೩' ಎತ್ತರದ ವಿಗ್ರಹವಿದೆ. ಇದನ್ನು ಕನಕದಾಸರು ತಮ್ಮ ಹುಟ್ಟೂರಾದ ಬಾಡದಿಂದ ತಂದು ಇಲ್ಲಿ ಪ್ರತಿಷ್ಠಾಪಿಸಿದರು ಎಂಬ ನಂಬಿಕೆ ಬಲವಾಗಿದೆ. ಆದಿಕೇಶವನ ಪ್ರಭಾವ ಇತರೆ ಭಾಗವತ ಸಂಪ್ರದಾಯದವರ ಮೇಲೆ ಸಾಕಷ್ಟು ಆಗಿರುವುದು ಕಂಡುಬರುತ್ತದೆ. ಏಕೆಂದರೆ ಕಾಗಿನೆಲೆಯ ಸುತ್ತ ಮುತ್ತ ಕಾಗಿನೆಲೆಯ ತತ್ಸಮ ವಿಗ್ರಹಗಳ ಸ್ಥಾಪನೆಯಾಗಿದೆ. ಕಾಗಿನೆಲೆಗೆ ಸುಮಾರು ಅರ್ಧಮೈಲಿ ದೂರದ ಮರಡಿಯ ಮೇಲೆ ಚೆನ್ನಕೇಶವ ಮತ್ತು ತಿಮ್ಮಕೇಶವ ಮೂರ್ತಿಗಳ ಪ್ರತಿಷ್ಠಾಪನೆಯಾಗಿದೆ. ಆದಿಕೇಶವನ ದೇವಾಲಯಕ್ಕೆ ನಡೆಯುವಂತೆಯೇ ಇಲ್ಲಿಯೂ ಪೂಜಾದಿಗಳು ನಡೆಯುತ್ತವೆ. ಗಮನಾರ್ಹವಾದ ವಿಷಯವೆಂದರೆ ವರ್ಷಕ್ಕೊಮ್ಮೆ ನಡೆಯುವ ಬನ್ನಿಪೂಜೆಯ ಉತ್ಸವದ ಸಮಯದಲ್ಲಿ ಕಾಗಿನೆಲ್ಲಿಯಿಂದ ಇಲ್ಲಿಗೆ ಪಲ್ಲಕ್ಕಿ ಸೇವೆ ಬರುವ ಪದ್ಧತಿ ಇಂದಿಗೂ ಚಾಲ್ತಿಯಲ್ಲಿದೆ. ಈ ಮೂರು ಮೂರ್ತಿಗಳ ಪ್ರತಿಷ್ಠಾಪನೆಯ ಹಿನ್ನೆಲೆಯಲ್ಲೂ ಒಂದು ಸಾಮಾನ್ಯಸಂಬಂಧವಿರುವಂತೆ ಕಂಡುಬರುತ್ತದೆ. ಆದರೆ ಈ ವಿಗ್ರಹಗಳನ್ನು ಯಾರು ಯಾರು ಯಾವಾಗ ಸ್ಥಾಪಿಸಿದರೆಂಬ ಬಗ್ಗೆ ಅಧಿಕೃತ ಆಧಾರಗಳು ದೊರೆಯದಾಗಿದೆ.

ಕನಕದಾಸರು ಕಾಗಿನೆಲೆಯಲ್ಲಿಯೇ ಕಾಲವಾದರೆಂಬ ನಂಬಿಕೆ ಪ್ರಬಲವಾಗಿದೆ. ಕಾಗಿನೆಲೆಯ ಒಂದು ದೊಡ್ಡ ಹಾಳು ಬಯಲಿನ

ಬದಿಯ ಕೆರೆಯ ದಂಡೆಯ ಮೇಲಿರುವ ಭಾರಿ ಅಶ್ವತ್ಥ ವೃಕ್ಷದ ಅಡಿಯಿರುವ ಸಮಾಧಿಯೇ ಕನಕದಾಸರ ಸಮಾಧಿಯೆಂದು ತಿಳಿಯ ಲಾಗಿದೆ. ಪ್ರಾಚೀನ ಸಂಪ್ರದಾಯದ ರೀತಿಯಲ್ಲಿರುವ ಗಚ್ಚಿನಿಂದ ಕಟ್ಟಿರುವ ಇದನ್ನು ಕನಕ ಗದ್ದುಗೆಯೆಂದೇ ಕರೆಯುತ್ತಾರೆ. ಆರಡಿ ಎತ್ತರ, ನಾಲ್ಕಡಿ ಅಗಲವಾಗಿರುವ ಈ ಸಮಾಧಿ ತುಂಬಾ ಶಿಥಿಲ ವಾಗಿದೆ. ಈಗಾಗಲೆ ಈ ಸಮಾಧಿಯ ಕಲ್ಲುಗಳು ಉದುರಿ ಬೀಳು ತ್ತಿವೆ.[1] ಸುತ್ತಮುತ್ತ ಹಾಳು ಪೊದೆಗಳು ಬೇಕಾಬಿಟ್ಟಿ ಬೆಳೆದು ಕೊಂಡಿವೆ.

ಈಗಿನ ಕಾಗಿನೆಲೆ ತನ್ನೆಲ್ಲ ಗತವೈಭವವನ್ನು ಕಳೆದುಕೊಂಡು ಒಂದು ಸಾಮಾನ್ಯ ಹಾಳೂರಾಗಿ ಉಳಿದಿದೆ. ಆದರೆ ಕನಕ ನಾಮದ ಸಮೀಕರಣದಿಂದಾಗಿ ಅದು ಕನ್ನಡ ಸಾಹಿತ್ಯ ಮತ್ತು ಕರ್ಣಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಅಜರಾಮರವಾಗಿದೆ.

## ೩. ಕನಕ ಪರೀಕ್ಷೆ

ಕನಕವನ್ನು ಒರೆಹಚ್ಚಿದಷ್ಟೂ ಉಜ್ವಲವಾಗಿ ಪ್ರಕಾಶಿಸುವಂತೆ ಕನಕದಾಸರು ವ್ಯಾಸರಾಯರ ಪರೀಕ್ಷೆಯಲ್ಲಿ ಗೆದ್ದು, ತಮ್ಮ ವ್ಯಕ್ತಿತ್ವ ಅಂತರಂಗದಲ್ಲೂ ಬಹಿರಂಗದಲ್ಲೂ ಶ್ರೇಷ್ಠವಾದುದು ಎಂಬುದನ್ನು ಪ್ರಕಟಪಡಿಸಿದರು. ಕನಕದಾಸರು ಲೌಕಿಕ ಬಾಂಧವ್ಯಗಳನ್ನು ಕಳಚಿ ವಿರಾಗಿಯಾಗಿ ವ್ಯಾಸಗುರುಗಳ ಮಠವನ್ನು ಸೇರಿದಾಗ,*

1. ಕನಕದಾಸರ ೪ನೆಯ ಶತಮಾನೋತ್ಸವ ಸಮಿತಿ ಇದರ ಜೀರ್ಣೋ ದ್ಧಾರ ಕಾರ್ಯವನ್ನು ಕೈಗೊಂಡು ಅದಕ್ಕೊಂದು ಸುಧಾರಿತ ರೂಪು ಕೊಡಲು ಪ್ರಯತ್ನಿಸಿತು.

* ಕನಕದಾಸರು ಶ್ರೀ ಕೃಷ್ಣದೇವರಾಯರ ಆಧಿಪತ್ಯದ ಅಡಿಯಲ್ಲಿ ದಣನಾಯಕರಾಗಿದ್ದವರು. ಕಾರಣಾಂತರದಿಂದ ಆ ಪದವಿಯಿಂದ ಬಿಡು

ಆರಂಭದಲ್ಲಿ ಅವರ ಬದುಕು ಅತ್ಯಂತ ಕಷ್ಟಕರವಾಗಿತ್ತೆಂದೇ ಹೇಳ ಬೇಕು. ಆಗ ಜಾತಿಮತಗಳ ಅಂತರ ಬಹಳ ಕಡಿದಾಗಿಯೂ, ಕಠಿಣವಾಗಿಯೂ ಇದ್ದ ಕಾಲ. ಬ್ರಾಹ್ಮಣ ಮಠದಲ್ಲಿ ಶೂದ್ರ ನೊಬ್ಬ ಸಮಸ್ಕಂದನಾಗಿ ಬದುಕುವುದು ದುಸ್ತರವಾಗಿತ್ತು. ಉಳಿದ ಮೇಲ್ಜಾತಿಯ ಶಿಷ್ಯರುಗಳು ಕನಕದಾಸರನ್ನು ಹೀನ ಕುಲದವನೆಂದು ಹೀಯಾಳಿಸುತ್ತಿದ್ದರು. ಕುಹಕನಿಂದೆ ಮತ್ತು ಕಟುನುಡಿಗಳಿಂದ ತಿವಿದು ಅವಮಾನ ಮಾಡುತ್ತಿದ್ದರು. ಕನಕ ರಾದರೋ "ಕುಲ ಕುಲ ಕುಲವೆನ್ನುತಿಹರು ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ಆತ್ಮಾಂತರಾತ್ಮ ನೆಲೆಯಾದಿಕೇಶವ ಆತ ನೊಲಿದ ಮೇಲೆ ಯಾತರ ಕುಲವಯ್ಯ" ಎಂದು ಅವರ ಟೀಕೆ ಯನ್ನು ಅಲಕ್ಷಿಸುತ್ತಿದ್ದರು, ಆದರೆ ದಿವ್ಯ ಜ್ಞಾನಿಗಳೂ ಹೃದಯ ವೈಶಾಲ್ಯವುಳ್ಳವರೂ ಆದ ವ್ಯಾಸರಾಯರಿಗೆ ಕನಕರೆಂದರೆ ಅಚ್ಚು ಮೆಚ್ಚು. ಕನಕದಾಸರ ಭಕ್ತಿ, ಪರಿಶುದ್ಧ ಚಾರಿತ್ರ್ಯ, ಅಸಾಧಾರಣ ಪ್ರತಿಭೆ, ಕಾವ್ಯ ಶಕ್ತಿ. ಅಧ್ಯಾತ್ಮ ಸಿದ್ಧಿ, ಯೌಗಿಕ ಬಲ ಮುಂತಾದ ಗುಣಗಳು ಚೆನ್ನಾಗಿ ತಿಳಿದಿದ್ದವು. ಕನಕದಾಸರು ಅಸಾಧಾರಣ ಪುರುಷರು ಎಂಬುದನ್ನು ಅವರು ಬಲ್ಲವರಾಗಿದ್ದರು. ಅವರ ಹೃನ್ಮನಗಳನ್ನು ಕನಕದಾಸರು ಸಂಪೂರ್ಣವಾಗಿ ಗೆದ್ದಿದ್ದರು. ಆದ್ದ ರಿಂದ ಅಸೂಯಾಪರ ಶಿಷ್ಯರ ಚಿಲ್ಲರೆ ಕೆಲಸಗಳಿಗೆ ಸೊಪ್ಪು ಹಾಕದೆ ಉದಾಸೀನದಿಂದ ಇದ್ದು ಬಿಟ್ಟರು. ಜೊತೆಗೆ ವ್ಯಾಸರಾಯ ಪ್ರೀತಿಗೆ ಪಾತ್ರರಾಗಿದ್ದ ಪುರಂದರದಾಸರೂ ಕೂಡ ಕನಕದಾಸರನ್ನು ತುಂಬ ಪ್ರೀತಿ ಗೌರವಗಳಿಂದ ಕಾಣುತ್ತಿದ್ದರು.

---

ಗಡೆ ಬಯಸಿದವರು. ವ್ಯಾಸರಾಯರಾದರೋ ಶ್ರೀ ಕೃಷ್ಣದೇವರಾಯರ ಪ್ರಭಾವಿ ಗುರುಗಳು. ಆದ್ದರಿಂದ ವ್ಯಾಸ ಮಠಕ್ಕೆ ಕನಕರು ಸೇರಲು ಕೃಷ್ಣ ದೇವರಾಯರ ಪಾತ್ರ ಇರಲು ಸಾಧ್ಯ.

ಮಠದ ಜನ ಕನಕದಾಸರನ್ನು ಹಳಿಯುವ ಮಾತಿರಲಿ ಕನಕ ದಾಸರನ್ನು ಅಕ್ಕರೆಯಿಂದ ಕಾಣುತ್ತಿದ್ದ ವ್ಯಾಸರಾಯರನ್ನೇ ಆ ಕಾರ ಣಕ್ಕಾಗಿ ನಿಂದಿಸತೊಡಗಿದರು.

ಕನಕದಾಸರ ಮೇಲೆ ದಯಮಾಡಲು ವ್ಯಾಸಮುನಿ
ಮಠದ ಜನರೆಲ್ಲ ದೂರಿ ಕೊಂಬುವರು
ತೀರ್ಥವನು ಕೊಡುವಾಗ ಕನಕನ್ನ ಕರೆಯಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ ಸಾರ್ಥಕವಾಯಿತು
ಇವರ ಸಂನ್ಯಾಸಿತನವೆಲ್ಲ ಪೂರ್ತಿಯಾಯಿತು

ಎಂದು ಟೀಕಿಸಿರುವುದನ್ನು ಪುರಂದರದಾಸರ ಮೇಲಿನ ಕೀರ್ತನೆ ಯಿಂದ ಸ್ಪಷ್ಟವಾಗುತ್ತದೆ. ಆದರೆ ಆಗ "ಯತಿ ನಗುತ್ತಿದ್ದ"ನಂತೆ. ಕನಕದಾಸರಾದರೊ ದೇವರೇ ವರ ಕೊಟ್ಟಿರುವಾಗ ಪೂಜಾರಿಗಳ ಗೊಡವೆ ಏಕೆಂದು ಸುಮ್ಮನಿದ್ದು ಬಿಡುತ್ತಿದ್ದರು. ವ್ಯಾಸರಾಯ ರಿಗೆ ಮಾತ್ರ ಕನಕನ ಸತ್ವವನ್ನು ಪ್ರಕಟಪಡಿಸಿ,–ಶಿಷ್ಯರಿಗೆ ಪಾಠ ಕಲಿಸಿ ಸರಿದಾರಿಗೆ ತರಬೇಕೆಂಬ ಸಂಕಲ್ಪವಾಯಿತು. ಅಂತಹ ಪ್ರಸಂಗಗಳು ಕನಕದಾಸರ ಕನಕತ್ವವನ್ನು ಉಜ್ವಲವಾಗಿ ಪ್ರಕಟ ಪಡಿಸಿವೆ. ಪವಾಡ ಸದೃಶವಾಗಿ ಜರುಗಿದ ಈ ಘಟನೆಗಳನ್ನು ಅನೇಕರು ಐತಿಹ್ಯಗಳೆಂದೂ, ದಂತ ಕಥೆಗಳೆಂದೂ ತಿಳಿದಿದ್ದಾರೆ. ವಾಸ್ತವವಾಗಿ ಅವು ಪುರಂದರದಾಸರ ಹಾಡುಗಳಲ್ಲೇ ವ್ಯಕ್ತವಾಗಿ ರುವ ಸಂಗತಿಗಳು. ಆದ್ದರಿಂದ ಅವು ಹೆಚ್ಚು ಅಧಿಕೃತ ಮನ್ನಣೆಗೆ ಒಳಗಾಗುತ್ತವೆ.

(೧) ಒಂದು ದಿನ ವ್ಯಾಸರಾಯರು ತಮ್ಮ ಶಿಷ್ಯ ಸಮೂಹ ವನ್ನೆಲ್ಲ ಕರೆದು ಅವರಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಬಾಳೆಯ ಹಣ್ಣನ್ನು ಕೊಟ್ಟು ಯಾರೂ ಕಾಣದ ಸ್ಥಳದಲ್ಲಿ ತಿಂದು ಬನ್ನಿರೆಂದರು. ಪ್ರತಿಯೊಬ್ಬರೂ . ತಮ್ಮ ಬುದ್ಧಿ ಬಲವನ್ನೆಲ್ಲ

ಪ್ರಯೋಗಿಸಿ ಹೇಳಬಾರದ ನೋಡಲಾಗದ ಗೋಪ್ಯ ಸ್ಥಳಗಳನ್ನೆಲ್ಲ ಅರಸಿ ಯಾರಿಗೂ ಕಾಣದಂತೆ ಮರೆಯಲ್ಲಿ ತಿಂದು ಬಂದು ಗುರುಗಳಿಗೆ ವರದಿ ಒಪ್ಪಿಸಿದರು. ಕನಕದಾಸರು ಮಾತ್ರ ಬಾಳೆಯ ಹಣ್ಣನ್ನು ತಿನ್ನದೆ ಹಾಗೆಯೇ ತಂದು "ಗುರುಗಳೆ ಯಾರೂ ಇಲ್ಲದ ಸ್ಥಳದಲ್ಲಿ ನನಗೆ ತಿನ್ನಲು ಸಾಧ್ಯವಿಲ್ಲ. ಏಕೆಂದರೆ ಯಾರೂ ಇಲ್ಲದ ಸ್ಥಳ ಯಾವುದೂ ಇಲ್ಲ, ಸರ್ವಾಂತರ್ಯಾಮಿಯಾದ ಪರಮಾತ್ಮ ಎಲ್ಲೆಡೆಯೂ ಇದ್ದಾನೆ" ಎಂದರು. ಗುರುಗಳು ಕನಕನ ಅರಿವಿಗೆ ಹಿರಿ ಹಿರಿ ಹಿಗ್ಗಿದರು. ಉಳಿದ ಶಿಷ್ಯರ ತಲೆಗಳು ಸಂಕೋಚದಿಂದ ತಗ್ಗಿದವು.

(೨) ಇಷ್ಟಾದರೂ ಶಿಷ್ಯರಿಗೆ ಕನಕದಾಸರ ಬಗ್ಗೆ ಕರುಬುವುದು ಕಡಿಮೆ ಆಗಲಿಲ್ಲ; ವ್ಯಾಸರಾಯರು ಕನಕದಾಸರೊಂದಿಗೆ ಭಗವದ್ ವಿಚಾರಗಳಲ್ಲಿ ಸಮಭಾವದಿಂದ ಜಿಜ್ಞಾಸೆ ಮಾಡುವುದು ಸರಿದೋರಲಿಲ್ಲ. ಆಗ ಅವರ ಯೋಗ್ಯತೆಯ ಅರಿವು ಅವರಿಗಾಗುವ ಹಾಗೆ ಮಾಡಬೇಕೆಂಬ ಉದ್ದೇಶದಿಂದ ಗುರುಗಳು,–ಮಹಾ ಪಂಡಿತರುಗಳಿಂದ ಕೂಡಿದ ಒಂದು ವಿದ್ವತ್ ಗೋಷ್ಠಿಯನ್ನು (ಶಿಷ್ಯರ ಸಹಿತ) ಏರ್ಪಡಿಸಿದರು. ಆ ಗೋಷ್ಠಿಯನ್ನುದ್ದೇಶಿಸಿ. "ಇಲ್ಲಿ ಅನೇಕ ದಿವ್ಯ ಜ್ಞಾನಿಗಳಿದ್ದೀರಿ, ವೇದಾಗಮ ಪುರಾಣ ಶಾಸ್ತ್ರಗಳನ್ನು ಕರತಲಾಮಲಕ ಮಾಡಿಕೊಂಡವರಿದ್ದೀರಿ; ಶ್ರೇಷ್ಠ ಮಟ್ಟದ ಹರಿಭಕ್ತರಿದ್ದೀರಿ. ಇಷ್ಟು ಮಂದಿಯಲ್ಲಿ ವೈಕುಂಠಕ್ಕೆ ಹೋಗಲು ಅರ್ಹರಾರು ಎಂದು ಪ್ರಶ್ನಿಸಿದರು. ಸನ್ನಿವೇಶ ಗಂಭೀರವಾಯಿತು; ಉತ್ತರಿಸುವುದು ಯಾರಿಗೂ ಕಷ್ಟವಾಯಿತು. ಕೆಲವರು ಗುರುಗಳನ್ನು ಸುಲಭವಾಗಿ ಮೆಚ್ಚಿಸುವ ಉದ್ದೇಶದಿಂದ 'ಗುರುಗಳು ಮಾತ್ರವೇ ವೈಕುಂಠಕ್ಕೆ ಹೋಗಲು ಅರ್ಹರು' ಎಂದರು. ಅವರುಗಳ ಅಲ್ಪಮತಿಗಾಗಿ ಗುರುಗಳು ಕಿರುನಗೆ

ನಕ್ಕರು. ಗುರುಗಳು ಅಲ್ಲಿದ್ದ ಒಬ್ಬೊಬ್ಬರನ್ನೂ ತೋರಿಸಿ
ವೈಕುಂಠಕ್ಕೆ ಇವರು ಹೋಗುತ್ತಾರೆಯೆ? ಇವರು ಹೋಗು
ತ್ತಾರೆಯೆ? ಎಂದು ಪ್ರಶ್ನಿಸಿದರು. ಕನಕದಾಸರು ಗುರುಗಳ
ಎಲ್ಲಾ ಪ್ರಶ್ನೆಗಳಿಗೂ "ಇಲ್ಲಾ" ಎಂದೇ ಉತ್ತರಿಸಿದರು ಯಾರೋ
ಒಬ್ಬ "ಗುರುಗಳು?" ಎಂದ. ಕನಕದಾಸರು "ಇಲ್ಲಾ" ಎಂದು
ತಲೆ ಅಲ್ಲಾಡಿಸಿದರು. ಇನ್ನೊಬ್ಬ ಶಿಷ್ಯ "ಹಾಗಾದರೆ ನೀನು
ಹೋಗುತ್ತೀಯೋ?" ಎಂದು ವ್ಯಂಗ್ಯ ಬೆರೆತ ರೇಗುಧ್ವನಿ
ಯಲ್ಲಿ ಪ್ರಶ್ನಿಸಿದ. ಕನಕದಾಸರು ಪ್ರಶಾಂತಚಿತ್ತರಾಗಿ
ನಿರ್ವಿಕಾರ ಭಾವದಿಂದ "ನಾನು ಹೋದರೆ ಹೋದೇನು" ಎಂದು
ಹೇಳಿದರು. ಸಭೆಯಲ್ಲಿ ಗೊಂದಲ ಆರಂಭವಾಯಿತು. ಶಿಷ್ಯರು
ಇದೇ ಸಮಯವೆಂದು ಭಾವಿಸಿ "ನೋಡಿ ಗುರುಗಳೇ ಇವನ
ಉದ್ಧಟತನ. ಈತನಿಗೆ ದುರಹಂಕಾರ ಎಷ್ಟಿದೆ ಎಂಬುದು ಈಗ
ಲಾದರೂ ಗೊತ್ತಾಯಿತಲ್ಲ. ಇಲ್ಲಿ ಇಷ್ಟು ಜನ ಮಹಾಮಹಿಮ
ರಿರುವಾಗ, ತಮ್ಮಂತಹ ಪೂಜ್ಯರಿರುವಾಗ ವೈಕುಂಠಕ್ಕೆ ಹೋಗುವ
ಯೋಗ್ಯತೆ ತನಗೆ ಮಾತ್ರ ಇದೆ ಎಂದು ಹೇಳುತ್ತಿದ್ದಾನೆ" ಎಂದರು.
ಗುರುಗಳು ಮತ್ತೆ ಮುಗುಳು ನಕ್ಕು "ಕನಕ ಏನಪ್ಪ ಇದರ ಅರ್ಥ?"
ಎಂದರು. ಕನಕದಾಸರು "ಗುರುಗಳೇ ಯಾರಲ್ಲಿ 'ನಾನು' ಎಂಬ
ಅಹಂಕಾರ ಹೋಗುತ್ತದೆಯೋ ಅವರೆಲ್ಲರೂ ವೈಕುಂಠಕ್ಕೆ
ಹೋಗಲು ಅರ್ಹರು" ಎಂಬುದು ಇದರ ಅರ್ಥ ಎಂದರು.
ಗುರುಗಳು ಕನಕದಾಸರ ಆಧ್ಯಾತ್ಮಸಿದ್ಧಿಗೆ ಮೆಚ್ಚಿ ತಲೆದೂಗಿದರು;
ಉಳಿದವರು ನಾಚಿ ತಲೆ ಬಾಗಿದರು.

(೩) ಕನಕದಾಸರು ಪವಾಡಗಳನ್ನೂ ಮಾಡಿದರು ಎಂಬ
ಪ್ರತೀತಿ ಇದೆ. ವ್ಯಾಸರಾಯರು ತಮ್ಮ ಕೈಮುಷ್ಟಿಯನ್ನು ಶಿಷ್ಯ
ಸಮೂಹದೆದುರು ಹಿಡಿದು "ಇದರಲ್ಲೇನಿದೆ"? ಎಂದು ಪ್ರಶ್ನಿಸಿ

ದರು. ಯಾರಿಗೂ ನಿಜಸ್ಥಿತಿಯನ್ನು ತಿಳಿಯಲು ಸಾಧ್ಯವಾಗಲಿಲ್ಲ. ಆಗ ಕನಕದಾಸರು ಅದು ಭಗವತ್ ಸ್ವರೂಪವಾದ ಸಾಲಿಗ್ರಾಮ ಎಂದು ಸರಿಯಾಗಿಯೇ ಊಹಿಸಿದರು. ಕನಕದಾಸರಿಗೆ ಶ್ರೀ ಹರಿ ಒಲಿದಿದ್ದ; ಅವರು ಕೂಗಿದಾಗ ಬರುತ್ತಿದ್ದ. ಇದನ್ನು ತಿಳಿದ ವ್ಯಾಸರಾಯರೇ ಕನಕದಾಸರನ್ನು ಶ್ರೀ ಹರಿಯನ್ನು ತೋರಿಸುವಂತೆ ಕೇಳಿದರೆಂದೂ, ಕನಕದಾಸರ ಪ್ರಾರ್ಥನೆಗೆ ಒಲಿದು ಶ್ರೀ ಕೃಷ್ಣ ಜೂಲುನಾಯಾಗಿ, ಕಾಳಸರ್ಪವಾಗಿ ಕಾಣಿಸಿಕೊಂಡನೆಂದೂ ಹೇಳುತ್ತಾರೆ. ಈ ಮೂರನೆಯ ಭಾಗದ ಪವಾಡಾಂಶಗಳನ್ನು ನಾವು ಪ್ರತಿಮಾ ಸತ್ಯದಿಂದ ಸ್ವೀಕರಿಸಬೇಕಾಗುತ್ತದೆ. ಕನಕದಾಸರು ಶ್ರೀ ಹರಿಯ ಪರಮ ಭಕ್ತರು, ಅಂತಹವರಿಗೆ ಆತ ಒಲಿಯುತ್ತಾನೆ ಎಂಬುದು ಇಲ್ಲಿನ ವಾಸ್ತವಾಂಶ.

ವ್ಯಾಸರಾಯರು ಮತ್ತು ಪುರಂದರದಾಸರು ಕನಕದಾಸರ ಸತ್ವವನ್ನು ಚೆನ್ನಾಗಿ ತಿಳಿದಿದ್ದರೆಂಬುದು ಸ್ಪಷ್ಟವಾಗುತ್ತದಾದರೂ ಕನಕದಾಸರು ಮಾತ್ರ ಎಲ್ಲಿಯೂ ಇವರಿಬ್ಬರ ಹೆಸರುಗಳನ್ನು ಹೇಳಿಲ್ಲ.

ಕನಕದಾಸರು ಶ್ರೀ ಹರಿಯ ಪರಮಭಕ್ತರಾಗಿದ್ದರೂ ಸಹ ಸಂಪ್ರದಾಯಸ್ಥರಿಂದ ಅವರಿಗೆ ಸಾಮಾಜಿಕ ದೂರೀಕರಣ ತಪ್ಪಲಿಲ್ಲ. ಇದು ಕನಕರ ವ್ಯಕ್ತಿತ್ವದ ಪ್ರಕಾಶನಕ್ಕೂ ಕಾರಣವಾಯಿತು. "ಈ ಸಂದರ್ಭವೇ ಒಂದು ಸಾಮಾಜಿಕ ಪರಿಸ್ಥಿತಿಯನ್ನು ಸ್ಪಷ್ಟಪಡಿಸುತ್ತದೆ. ಉಡುಪಿಯಲ್ಲಿ ಕೃಷ್ಣದೇವಾಲಯಕ್ಕಿಂತ ಕನಕನ ಕಿಂಡಿಯೇ ಪ್ರಸಿದ್ಧವಾದದ್ದು. ಇದರ ವಾಸ್ತವಿಕತೆ ಏನೇ ಇರಲಿ ಕನಕದಾಸರ ಹಿರಿಮೆಯನ್ನಂತೂ ಎತ್ತಿಹಿಡಿಯುತ್ತದೆ"[1]

---

1. ನಾಯಕ, ಹಾ. ಮಾ., ಮೆಚ್ಚುಮಾತು, ಕನಕಕಿರಣ, ಕಾ. ತ. ಚಿಕ್ಕಣ್ಣ (ಸಂ), ಬೆಂಗಳೂರು, ಪು. iv

## ೪. ಕನಕದಾಸರ ಸಾಹಿತ್ಯ

ಕನಕದಾಸರು ಬಸವಣ್ಣನವರಂತೆ ಹಿಂದುಳಿದವರಿಗಾಗಿ ಸಾಮಾಜಿಕ ಹೋರಾಟವನ್ನೇನು ನಡೆಸಲಿಲ್ಲ. ಆದರೆ ಸಾಹಿತ್ಯಕವಾಗಿ ಇದು ತಕ್ಕಮಟ್ಟಿಗೆ ನಡೆದಿರುವುದು ಅವರ ಸಾಹಿತ್ಯವನ್ನು ಸೂಕ್ಷ್ಮವಾಗಿ ಗಮನಿಸಿದವರಿಗೆ ಗೊತ್ತಾಗುತ್ತದೆ. ಕುಲವನ್ನು ಕುರಿತ ಕನಕರ ಕೀರ್ತನೆಗಳಲ್ಲಿ, ರಾಮಧಾನ್ಯ ಚರಿತ್ರೆಯಲ್ಲಿನ ರಾಗಿಯ ಮಾತಿನಲ್ಲಿ ಇದು ಧ್ವನಿಸುತ್ತದೆ. ಕನಕದಾಸರು ದಾಸ ಪಂಗಡದಲ್ಲಿ ಸಾಮಾಜಿಕವಾಗಿ ಹಿಂದುಳಿದಿದ್ದರು ನಿಜ. ಆದರೆ ಸಾಹಿತ್ಯಕವಾಗಿ ಅವರು ಉಳಿದೆಲ್ಲರಿಗಿಂತ ಮಿಗಿಲಾಗಿದ್ದರು. ಉಳಿದ ದಾಸರಾರೂ ಹೇಳಿಕೊಳ್ಳುವಂತಹ ಗ್ರಂಥ ರಚನೆ ಮಾಡಿದವರಿಲ್ಲ. ಕನಕದಾಸರಾದರೆ ಶ್ರೇಷ್ಠಮಟ್ಟದ ಕೀರ್ತನೆಗಳನ್ನು ಮಾತ್ರವಲ್ಲದೆ ಉತ್ತಮ ಮಟ್ಟದ ಸಾಹಿತ್ಯಕೃತಿಗಳನ್ನೂ ರಚಿಸಿದ್ದರು. ಅವುಗಳು ಬಗೆ ಬಗೆಯ ಛಂದೋ ಮಾಧ್ಯಮಗಳಿಂದ ವೈವಿಧ್ಯಮಯವಾಗಿದ್ದವು. ಮೋಹನ ತರಂಗಿಣಿ, ರಾಮಧಾನ್ಯಚರಿತ್ರೆ, ನಳಚರಿತ್ರೆ ಮತ್ತು ಹರಿಭಕ್ತಿಸಾರ ಅವರು ಬರೆದ ಕೃತಿಗಳು. ಇದರಿಂದಾಗಿ ಅವರಿಗೊಂದು ವಿಶಿಷ್ಟ ಆತ್ಮವಿಶ್ವಾಸ ಲಭ್ಯವಾದುದರಲ್ಲಿ ಆಶ್ಚರ್ಯವಿಲ್ಲ. "ಅವರೊಳಗಿನ ಶೂದ್ರಸತ್ತ್ವವೂ ಅವರ ಕವಿತೆಯ ಮೇಲ್ಮೆಗೆ ಖಂಡಿತಾ ನೆರವಾಗಿದೆ. ಅಂತೂ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಮೇಲು ಜಾತಿಯವರ ಗುತ್ತಿಗೆಯನ್ನು ಮುರಿದ ಕೀರ್ತಿ ಕನಕದಾಸರದು."[1]

### (ಅ) ಮೋಹನ ತರಂಗಿಣಿ

ಮೋಹನ ತರಂಗಿಣಿ ಕನ್ನಡದ ಶ್ರೇಷ್ಠ ಸಾಂಗತ್ಯ ಕೃತಿಗಳಲ್ಲೊಂದು ;

---

1. ಸಿ.ಪಿ.ಕೆ., ಕನಕದಾಸರ ಅನನ್ಯತೆ, ಕನಕ ಕಿರಣ, ಕಾ.ತ. ಚಿಕ್ಕಣ್ಣ (ಸಂ) ಪು. ೨೬೦

ಮಹಾಕಾವ್ಯದ ಆಳತೆಗೋಲಿಟ್ಟುಕೊಂಡು, ಅದರ ಎಲ್ಲ ಲಕ್ಷಣಗಳನ್ನೊಳಗೊಂಡು ರಚಿತವಾದ ಕೃತಿ. ಕನಕದಾಸರ ವರ್ಣನಾವೈಖರಿಗೆ ಇದು ಒಳ್ಳೆಯ ನಿದರ್ಶನವಾಗಿದೆ. ಹಲವು ನಿಟ್ಟುಗಳಿಂದ ಇದು ಗಮನಾರ್ಹವಾಗಿದೆ.

**ಕಥಾಸಾರ**

ಸಕಲ ಸಂಪದ್ಭರಿತವಾಗಿದ್ದ ದ್ವಾರಕೆಯನ್ನು ಶ್ರೀಕೃಷ್ಣ ಆಳುತ್ತಿದ್ದ. ರುಕ್ಮಿಣಿ ಕ್ರೀಡಾವಿಹಂಗವನ್ನು ಕಂಡುದರಿಂದ ತನಗಾದ ಬಯಕೆ ಯನ್ನು ಕೃಷ್ಣನಿಗೆ ತಿಳಿಸಿದಳು. ಅವಳಿಗೆ ಮನ್ಮಥನೇ ಮಗನಾಗಿ ಹುಟ್ಟುವುದಾಗಿ ಕೃಷ್ಣ ತಿಳಿಸಿದ. ಅಂತೆಯೇ ಅವಳು ಗರ್ಭ ಧರಿಸಿ ಪ್ರದ್ಯುಮ್ನನನ್ನು ಹೆತ್ತಳು. ಮಗು ಹುಟ್ಟಿದ ಹತ್ತು ದಿನಗಳಲ್ಲಿ ಶಂಬರಾಸುರನು ಅದನ್ನು ಅಪಹರಿಸಿ ಸಮುದ್ರಕ್ಕೆ ಎಸೆದನು. ರುಕ್ಮಿಣಿ ದುಃಖಿತೆಯಾದಳು.

ಈ ಕಡೆ ತಾರಕಾಸುರನ ಉಪಟಳಕ್ಕೆ ಒಳಗಾದ ದೇವತೆಗಳು ತ್ರಿಮೂರ್ತಿಗಳಿಗೆ ಮೊರೆಯಿಟ್ಟರು. ಶಿವನಿಂದ ಹುಟ್ಟುವ ಮಗ ನಿಂದ ತಾರಕಾಸುರನ ವಧೆಯಾಗುವುದೆಂದು ನಾರಾಯಣನು ತಿಳಿಸಿದನು. ಬ್ರಹ್ಮಚಾರಿಯಾದ ಶಿವ ಮದುವೆಯಾಗಬೇಕು. ದೇವತೆಗಳ ಸಂಚಿನಂತೆ ತಪೋಧಾರಿಯಾದ ಶಿವನ ಬ್ರಹ್ಮಚರ್ಯೆ ಯನ್ನು ಕೆಡಿಸಲು ಮನ್ಮಥ ಪುಷ್ಪಬಾಣ ಪ್ರಯೋಗಿಸಿದ; ಶಿವನ ಹಣೆಗಣ್ಣಿನಿಂದ ಮದನ ಬೂದಿಯಾದ. ಅಪಾರ ದುಃಖಿತೆಯಾದ ರತಿಯ ರೋದನಕ್ಕೆ ಶಿವ ಮರುಗಿ ಅವಳಿಗೆ ವೈಧವ್ಯವಿಲ್ಲವೆಂದೂ ಮನ್ಮಥ 'ಮನಸಿಜ' ನಾಗಿ ಅವಳು ಕರೆದಾಗ ಬಂದು ಸುಖವೀವ ನೆಂದೂ ವರವಿತ್ತ. ಗಂಡನನ್ನು ಅರಸುತ್ತ ಬಂದ ರತಿ ಶಂಬರಾ ಸುರನ ಪಟ್ಟಣಕ್ಕೆ ಬಂದು ಅಲ್ಲಿ ಅಡಿಗೆಯವಳಾಗಿ ಸೇರಿದಳು.

ಇತ್ತ ಶಂಬರಾಸುರ ಎಸೆದಿದ್ದ ಪ್ರದ್ಯುಮ್ನ ಶಿಶುವನ್ನು ಸಮುದ್ರದಲ್ಲಿ ಒಂದು ಮೀನು ನುಂಗಿತು. ಬೆಸ್ತರಿಗೆ ಸಿಕ್ಕಿದ ಅದನ್ನು ಶಂಬರನು ಅಡಿಗೆಯ ಮನೆಗೆ ಕೊಟ್ಟನು. ರತಿ ಅದನ್ನು ಕೊಯ್ದಾಗ ಮಗು ಹೊರಬಂದಿತು. ಅಶರೀರವಾಣಿಯಂತೆ ಅದನ್ನು ಸಾಕಲಪೇಕ್ಷಿಸಿದ ರತಿಗೆ ಶಂಬರ ಅನುಮತಿಯಿತ್ತನು ಮತ್ತು ಬೆಳೆದ ಆ ಹುಡುಗನಿಗೆ ತನಗೆ ಶುಕ್ರರಿಂದ ತಿಳಿದ ಹದಿ ನಾರು ಶತವಿದ್ಯೆಗಳನ್ನು ಹೇಳಿಕೊಟ್ಟನು.

ಆದರೆ ಪ್ರದ್ಯುಮ್ನನು ಶಂಬರನನ್ನು ಕೊಂದು ರತಿಯೊಡನೆ ದ್ವಾರಕೆಯನ್ನು ಸೇರಿದನು. ಅಲ್ಲಿ ಅವರಿಗೆ ವೈಭವದಿಂದ ವಿವಾಹ ವಾಯಿತು. ಆ ದಂಪತಿಗಳಿಗೆ ಅನಿರುದ್ಧ ಜನಿಸಿದ. ಅವನು ಬೆಳೆದು ಸಕಲ ವಿದ್ಯೆಗಳಲ್ಲಿ ಪಾರಂಗತನಾದ.

ಇನ್ನೊಂದು ಕಡೆ ಶೋಣಿತಪುರವನ್ನಾಳುತ್ತಿದ್ದ ಬಾಣಾಸುರ ನೆಂಬ ಮಹಾವೀರನು ಅಪ್ರತಿಮ ಶಿವಭಕ್ತನಾಗಿದ್ದನು. ಸಾವಿರ ಬಾಹುಗಳ ಈ ದೈತ್ಯನಿಗೆ ತನಗೆ ಸಮಾನ ವೀರರೊಂದಿಗೆ ಹೋರಾಡುವ ಹಂಬಲ. ಅವನ ರಥಧ್ವಜ ಮುರಿದಾಗ ಆ ಅವಕಾಶ ಒದಗುವುದೆಂದು ಶಿವ ಸೂಚಿಸಿದ.

ಬಾಣಾಸುರನಿಗೆ ಉಷೆ ಎಂಬ ಮಹಾಸುಂದರಿ ಮಗಳಿದ್ದಳು ಈಕೆಗೆ ಶಿವನ ಸೂಚನೆಯಂತೆ ಕನಸಿನಲ್ಲಿ ಕಂಡ ಅನಿರುದ್ಧನನ್ನು ಮದುವೆಯಾಗುವ ಬಯಕೆ. ಈಕೆಯ ಸಖಿ ತನ್ನ ಮಾಯಾ ವಿದ್ಯೆಯಿಂದ ದ್ವಾರಕೆಯಲ್ಲಿದ್ದ ಅನಿರುದ್ಧನನ್ನು ಕರೆದು ತಂದಳು ಅನಿರುದ್ಧ ಮತ್ತು ಉಷೆಯರ ಗಾಂಧರ್ವ ವಿವಾಹವಾಯಿತು ಆದರೆ ನಾರದರು ಬಾಣನಲ್ಲಿಗೆ ಬಂದು ಉಷೆ ಸೂಳೆಯಾಗಿರುವ ಳೆಂದು ತಿಳಿಸಿದನು. ಕ್ರುದ್ಧನಾದ ಬಾಣಾಸುರನು ಅನಿರುದ್ಧ ನೊಡನೆ ಹೋರಾಡಿ ತಂದು ಸೆರೆಯಲ್ಲಿಟ್ಟನು. ನಾರದನಿಂದ

ವಿಷಯವನ್ನು ತಿಳಿದ ಶ್ರೀ ಕೃಷ್ಣನು ಸಮಸ್ತ ಸೈನ್ಯದೊಡನೆ ಶೋಣಿತಪುರಕ್ಕೆ ಬಂದನು. ಭಕ್ತನಾದ ಬಾಣನರಮನೆಯ ಬಾಗಿಲು ಕಾಯುತ್ತಿದ್ದ ಶಿವನು ಕೃಷ್ಣನನ್ನು ಎದುರಿಸಿದನು. ಶಿವನ ಸೈನ್ಯಕ್ಕೂ ಕೃಷ್ಣನ ಸೈನ್ಯಕ್ಕೂ ಯುದ್ಧವಾಯಿತು. ಕೃಷ್ಣ ಮತ್ತು ಬಾಣಾಸುರರ ಯುದ್ಧದಲ್ಲಿ ಕೃಷ್ಣನು ಬಾಣಾಸುರನ ೯೯೮ ತೋಳುಗಳನ್ನು ಕಡಿದನು. ಆಗ ಶಿವನು ಮಧ್ಯೆ ಬಂದು ಕೃಷ್ಣನಿಗೆ ಸಮಾಧಾನ ಹೇಳಿ,— ಬಾಣಾಸುರನಿಗೆ ತಾನು ಮತ್ತು ಕೃಷ್ಣ ಬೇರೆಯಲ್ಲ ಎಂದು ಹೇಳಿದನು. ಉಷಾ ಅನಿರುದ್ಧರ ವಿವಾಹವಾಯಿತು. ಶಿವ ಬಾಣಾಸುರನನ್ನು ಕೈಲಾಸಕ್ಕೆ ಕರೆದೊಯ್ದನು. ಶ್ರೀಕೃಷ್ಣ ಅನಿರುದ್ಧ ಮತ್ತು ಉಷೆಯರನ್ನು ದ್ವಾರಕೆಗೆ ಕರೆದುಕೊಂಡು ಹೋದನು. ಮುಂದೆ ಎಲ್ಲರೂ ಸುಖವಾಗಿದ್ದರು.

## ವಿಮರ್ಶೆ

ಕನಕದಾಸರ ಹಲವು ಮುಖಗಳ ಪ್ರತಿಭೆಗೂ ರಸಿಕತೆಗೂ ಕನ್ನಡಿ ಹಿಡಿದಂತೆ ಮೂಡಿಬಂದಿದೆ ಮೋಹನ ತರಂಗಿಣಿ. ಅಚ್ಚಗನ್ನಡದ ದೇಶೀಯ ಛಂದಸ್ಸಿನಲ್ಲಿ, ೪೨ ಸಂಧಿಗಳಲ್ಲಿ, ೨೦೦೦ ಪದ್ಯಗಳ ಮೃದು ಪದಗತಿಯಲ್ಲಿ ಹರಡಿಕೊಂಡಿದೆ ಈ ಕಾವ್ಯ. "ಇಲ್ಲಿ ಆರಿಸಿಕೊಂಡಿರುವ ಕಥಾವಸ್ತು ಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣ ಮತ್ತು ಸ್ಕಂದ ಪುರಾಣಗಳಲ್ಲಿ ಉಕ್ತವಾಗಿರುವುದರಿಂದ ಅದಕ್ಕೆ ವಿಶೇಷವಾದ ಪ್ರಾಚುರ್ಯವಿದೆ."[1] ಕಾಳಿದಾಸನ ಕುಮಾರಸಂಭವ ಮತ್ತು ಹರಿಹರ ಕವಿಯ ಗಿರಿಜಾ ಕಲ್ಯಾಣ

---

1. ವರದರಾಜರಾವ್, ಜಿ., ೧೯೬೬. ಹರಿದಾಸ ಹೃದಯ, ಪು. ೬೦.

ಮಹಾಕಾವ್ಯಗಳ ಪ್ರಭಾವ ಮೋಹನ ತರಂಗಿಣಿಯ ಆರಂಭದ ಭಾಗದಲ್ಲಿ ಕಂಡುಬರುತ್ತದೆ. ಆದರೆ ಅಗತ್ಯವಾದುದನ್ನು ಅಳವಡಿಸಿ ಅನಗತ್ಯವಾದುದನ್ನು ತೆಗೆದುಹಾಕಿ ಕಾವ್ಯದ ಒಟ್ಟು ಚೆಲುವನ್ನು ಅರ್ಥವತ್ತಾಗಿ ಕಾಯ್ದುಕೊಂಡಿರುವುದರಲ್ಲಿ ಕನಕದಾಸರ ಪ್ರತಿಭೆ ಕೆಲಸ ಮಾಡಿದೆ.

ಉನ್ನತ ಪೌರಾಣಿಕ ಕಲ್ಪನೆಯು ಈ ವಸ್ತುವನ್ನು ಆರಿಸಿಕೊಳ್ಳು ವಾಗ ಕನಕದಾಸರಿಗೆ ಇದನ್ನೊಂದು ಮಹಾಕಾವ್ಯವನ್ನಾಗಿ ಮಾಡ ಬೇಕೆಂಬ ಮಹತ್ವಾಕಾಂಕ್ಷೆ ಇದ್ದಂತೆ ಕಂಡುಬರುತ್ತದೆ. ಸಮಸ್ತ ಬ್ರಹ್ಮಾಂಡವೇ ಇಲ್ಲಿನ ಕಾವ್ಯಕ್ಷೇತ್ರವಾಗಿದೆ. ಹರಿಹರ ಬ್ರಹ್ಮಾದಿಗಳು, ದೇವದಾನವರು, ಮಾನವರು ಇಲ್ಲಿನ ಪಾತ್ರವರ್ಗ. ದೇವ, ದೈತ್ಯ ಮತ್ತು ಮರ್ತ್ಯಲೋಕಗಳಲ್ಲಿ ಕ್ರಿಯೆ ಜರುಗುತ್ತವೆ. ದೇವದಾನವ ಸಂಘರ್ಷ ಅದರಲ್ಲಿ ದೇವತೆಗಳ ಗೆಲುವು ಮುಖ್ಯ ವಾಗಿ ಕಂಡುಬರುತ್ತದೆ.

ಈ ಕೃತಿಯಲ್ಲಿ ಮುಖ್ಯವಾಗಿ ನಾಲ್ಕು ಘಟ್ಟಗಳನ್ನು ಗುರುತಿಸ ಬಹುದು :

೧. ದ್ವಾರಕೆಯಲ್ಲಿ ಶ್ರೀ ಕೃಷ್ಣವೈಭವದ ಭೋಗ ಜೀವನ ಮತ್ತು ಪ್ರದ್ಯುಮ್ನನ ಜನನ ವೃತ್ತಾಂತ.
೨. ಮನ್ಮಥ ದಹನ ಮತ್ತು ರತಿಯ ವಿಲಾಸದ ಪ್ರಸಂಗಗಳು
೩. ಶಂಬರಾಸುರನ ವಧೆ ಮತ್ತು ರತಿ ಪ್ರದ್ಯುಮ್ನರ ವಿವಾಹ
೪. ಉಷೆ ಮತ್ತು ಅನಿರುದ್ಧರ ಪ್ರಣಯ, ಬಾಣಾಸುರನ ಕೋಪ, ಹರಿಹರರ,–ಕೃಷ್ಣ ಬಾಣಾಸುರರ ಯುದ್ಧಗಳು ಮತ್ತು ಉಷಾ ಅನಿರುದ್ಧರ ವಿವಾಹ.

ಮೋಹನ ತರಂಗಿಣಿ ವರ್ಣನಾ ಪ್ರಧಾನವಾದ ಕಾವ್ಯ. ಅದು ಕಾಡಾಗಲಿ, ನಾಡಾಗಲಿ, ಶಿವಪೂಜೆಯಾಗಲಿ, ಹರಿಭಕ್ತಿಯಾಗಲಿ

ಅಲ್ಲಿ ಮನಮೋಹಕವಾದ ವರ್ಣನಾ ಸೌಂದರ್ಯವನ್ನು ಕಾಣಬಹುದು.

ಕನಕರದೇ ಆದ ವೈಶಿಷ್ಟ್ಯ ಒಂದುಂಟು. ಅದು ಪಾತ್ರವೊಂದನ್ನು ಅದು ಯಾವುದೇ ಕಾರಣಕ್ಕೂ ಪೂರ್ಣ ದಾನವತ್ವಕ್ಕೆ ಒಳಗು ಮಾಡದೆ ಇರುವಂತಹದು. ಯಾವುದೇ ಸಂಸ್ಕೃತ ಮಹಾಕಾವ್ಯಗಳನ್ನು ತೆಗೆದುಕೊಂಡರೂ ಸಹ ಅಲ್ಲಿನ ರಾಕ್ಷಸ ಪಾತ್ರಗಳಲ್ಲಿ ನೀಚತನದ ಪರಮಾವಧಿಯನ್ನು ಕಾಣಬಹುದು. ಆದರೆ ದಾನವರಲ್ಲಿನ ಉದಾತ್ತತೆಯನ್ನು ಪ್ರಕಾಶಗೊಳಿಸಿ ಪಾತ್ರಗಳಲ್ಲಿನ ಘನತೆಯನ್ನು ಹೆಚ್ಚಿಸಿದ್ದು ಕನಕರ ಹೆಗ್ಗಳಿಕೆ. ಮೋಹನ ತರಂಗಿಣಿ ಈ ದೃಷ್ಟಿಯಿಂದ ಮಹತ್ವದ ಕೃತಿಯಾಗಿದೆ.

ಪ್ರದ್ಯುಮ್ನನಿಂದ ತನ್ನ ವಧೆಯಾಗುತ್ತದೆಂಬ ಅಂಶವನ್ನು ನಾರದರಿಂದ ತಿಳಿದ ಶಂಬರಾಸುರ–ಶಿಶು ಪ್ರದ್ಯುಮ್ನನನ್ನು ತಾಯಿಯ ಮಡಲಿನಿಂದ ಅಪಹರಿಸುತ್ತಾನೆ. ಆದರೆ ಆತ ಆ ಹಸುಗೂಸನ್ನು ಕೊಲ್ಲಲಾರ–ಮುಂದೆ ಅದೇ ತನ್ನನ್ನು ಕೊಲ್ಲಲಿರುವುದನ್ನು ತಿಳಿದೂ ಸಹ. ಇಲ್ಲಿ ಅವನ ಅಂತಃಕರಣ, ಮಾನವೀಯತೆ ಮತ್ತು ಉದಾರತೆಗಳು ಅನುಪಮವಾದುವುಗಳು. ಮುಂದೆ ಶಂಬರಾಸುರನೆ ಆ ಮಗುವಿಗೆ ಸಕಲಶಾಸ್ತ್ರಗಳನ್ನೂ, ಶಸ್ತ್ರಾಸ್ತ್ರ ವಿದ್ಯೆಗಳನ್ನೂ ಕಲಿಸುತ್ತಾನೆ. ಎಲ್ಲವನ್ನು ಕಲಿತ ಪ್ರದ್ಯುಮ್ನ ಶಂಬರನನ್ನು ಕೊಂದು ಬರುತ್ತಾನೆ. ಇಲ್ಲಿ ದಾನವತ್ವ ದೇವತ್ವವನ್ನು ಮೀರಿನಿಂತಿರುವುದನ್ನು ನೋಡುತ್ತೇವೆ.

ಇನ್ನು ಬಲಿಯ ಮೊಮ್ಮಗನಾದ ಬಾಣಾಸುರ ಲೆಕ್ಕಕ್ಕೆ ಪ್ರತಿನಾಯಕ. ಕವಿಯ ಆರಾಧ್ಯದೈವವಾದ ಶ್ರೀ ಕೃಷ್ಣ ನಾಯಕ. ಆದರೆ ಬಾಣಾಸುರನಲ್ಲಿ ಖಳನ ಯಾವೊಂದು ಅಂಶವೂ ಕಂಡು ಬರುವುದಿಲ್ಲ. ಆತ ಪರಶಿವನ ಪರಮ ಭಕ್ತ. ಶಿವ ಇವನ ಭಕ್ತಿಗೆ

ಮೆಚ್ಚಿ ಬಂದು ಬಾಗಿಲು ಕಾದ. ಇವನ ಪೂಜಾ ವಿಧಾನವೇ ಇಲ್ಲಿನ ಒಂದು ವಿಶಿಷ್ಟ ಅಧ್ಯಾಯ. ಕಾವ್ಯದುದ್ದಕ್ಕೂ ಹರಿಭಕ್ತಿಯ ಪಾರಮ್ಯ ಕಂಡು ಬಂದರೂ ಸಹ ಹರಪೂಜೆಗೆ ಹರಿಪೂಜೆಯಷ್ಟೇ ಮಹತ್ವ ಕೊಡುವ ಭಾಗವತ ದೃಷ್ಟಿ ಕನಕರದು.

ಅನಿರುದ್ಧ ಅಕ್ರಮವಾಗಿ ಅರಮನೆಗೆ ಪ್ರವೇಶಿಸಿ ಉಷೆಯೊಡನೆ ಸಂಬಂಧವಿರಿಸಿಕೊಂಡ ವಿಷಯವನ್ನು ತಿಳಿದ ಬಾಣಾಸುರ ಅವನನ್ನು ಬಂಧಿಸುವುದರಲ್ಲಿ ಅರ್ಥವಿದೆ. ಅಕ್ರಮಿಗಳ ಬಂಧನ ರಾಜಕೀಯ ಧರ್ಮವೂ ಹೌದು. ಮೊಮ್ಮಗನ ಬಿಡುಗಡೆಗಾಗಿ ಶ್ರೀಕೃಷ್ಣ ಹೋರಾಡುವುದು ಅನಿವಾರ್ಯ (ಪ್ರಣಯ ಪ್ರಸಂಗಗಳಲ್ಲಿ ಮೊಮ್ಮಗ ತನ್ನ ಪರಂಪರೆಯನ್ನು ಮುಂದುವರಿಸಿದ ಸಮಾಧಾನ ಶ್ರೀಕೃಷ್ಣನಿಗಿರಬೇಕು). ಹರ ಹರಿಗೆ ಎದುರಾಗುತ್ತಾನೆ. ಕಥೆ ಇಲ್ಲಿ ಕುತೂಹಲದ ತುತ್ತತುದಿಗೇರುತ್ತದೆ. ಹರಿಭಕ್ತರಾದ ಕನಕರು ಎಲ್ಲಿ ಎಡವುತ್ತಾರೊ ಎಂಬ ಸಂದೇಹ ಯಾರಿಗೂ ಸಹಜವೆ? ಆದರೆ ಇಲ್ಲಿ ಅವರು ಅಸಾಧಾರಣ ಜಾಣ್ಮೆಯಿಂದ ಶಿವನ ಬಾಯಲ್ಲಿ ನಾನು ಬೇರೆ ಅಲ್ಲ ಕೃಷ್ಣ ಬೇರೆ ಅಲ್ಲ ನಾವಿಬ್ಬರೂ ಒಂದೇ ಎಂಬ ಮಾತು ತಂದು ಬಾಣಾಸುರನನ್ನು ಸಮಾಧಾನ ಮಾಡುತ್ತಾರೆ. ಇಲ್ಲಿ ನಿರಪರಾಧಿಯಾದ ಬಾಣಾಸುರನ ಕೊಲೆ ಮಾಡಿಸುವುದು ಕನಕರಿಗೆ ಇಷ್ಟವಿಲ್ಲ. ಅದಕ್ಕೆ ಬದಲಾಗಿ ಸಾಕ್ಷಾತ್ ಶಿವನೇ ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಉಷಾ ಅನಿರುದ್ಧರ ವಿವಾಹ ಅನಿವಾರ್ಯ ಮಾತ್ರವಲ್ಲ ಅಪೇಕ್ಷಣೀಯ ಕೂಡ. ಹೀಗೆ ಅತ್ಯಂತ ಸಂದಿಗ್ಧ ಎನಿಸುವ ಸಂದರ್ಭಗಳಲ್ಲಿ ಸಹ ಕನಕರ ಪ್ರಜ್ಞೆ ತುಂಬ ಜಾಗೃತವಾಗಿ, ಸಮರ್ಥವಾಗಿ ಕ್ರಿಯೆಗೊಳ್ಳುವುದನ್ನು ನೋಡುತ್ತೇವೆ. ಕನಕರ ವಿಷ್ಣು ಭಕ್ತಿ ಎಲ್ಲಿಯೂ ಔಚಿತ್ಯದ ಗಡಿದಾಟಿಲ್ಲ. ಪಂಪನಂತಹ ಮಹಾಕವಿ ಕೂಡ

ಅರಿಕೇಸರಿಯು ಬಗೆಗಿನ ವ್ಯಕ್ತಿ ಪ್ರೇಮದಿಂದ ಮಹಾಭಾರತದ ಕಥೆಯನ್ನು ವಿಕೃತಗೊಳಿಸಿದ್ದುಂಟು.

ಕನಕದಾಸರು ಮೋಹನ ತರಂಗಿಣಿಯನ್ನು ಮಹಾಕಾವ್ಯವನ್ನಾಗಿಸುವ ಉದ್ದೇಶ ಹೊಂದಿದ್ದರೂ ಸಹ ಅವರು ಅದರಲ್ಲಿ ಪೂರ್ಣಯಶಸ್ಸು ಪಡೆಯಲು ಸಾಧ್ಯವಾಗಲಿಲ್ಲ. ಅದಕ್ಕೆ ಕಾರಣಗಳಲ್ಲಿ ಒಂದು ಅವರು ಸಾಂಗತ್ಯವನ್ನು ಆರಿಸಿಕೊಂಡದ್ದು. ಸಾಂಗತ್ಯ ಮಹಾಕಾವ್ಯಕ್ಕೆ ಸೂಕ್ತ ಛಂದೋ ಮಾಧ್ಯಮವಲ್ಲ. ಶೃಂಗಾರ ಮತ್ತು ಪ್ರಸಾದ ಗುಣದಲ್ಲಷ್ಟೇ ಅದರ ಯಶಸ್ಸು. ರತ್ನಾಕರ ವರ್ಣಿಯೊಬ್ಬ ಮಾತ್ರ ಹೇಗೋ ಇದರಲ್ಲಿ ಶಿಖರವನ್ನು ಮುಟ್ಟಿದ. ಅವನ ಪ್ರತಿಭೆಯ ವಿಸ್ತರಣೆಗೆ ಇದು ಬೇಲಿಯಾಯಿತು ಎಂಬುದನ್ನೂ ಮರೆಯಬಾರದು. ಕನಕರು ತಮಗೆ ಸಿದ್ಧಿಸಿದ್ಧ ಭಾಮಿನಿಯಲ್ಲೇ ಇದನ್ನು ಬರೆಯಬಹುದಿತ್ತು. ಯುದ್ಧವರ್ಣನೆಗೆ ಸಾಂಗತ್ಯ ಸೂಕ್ತವಲ್ಲ. ಆದರೆ ಸಾಂಗತ್ಯದ ಬಳಕೆಯಿಂದ ಕಾವ್ಯದಲ್ಲಿ ಬೇರೆ ಬಗೆಯ ಲಾಭಗಳು ಆದುವೆಂದು ಹೇಳಬಹುದು. ಶೃಂಗಾರ, ಪ್ರಣಯ ಮತ್ತು ಮೃದು ವರ್ಣನೆಗಳು ಇಲ್ಲಿ ಹೆಚ್ಚಾಗಿರುವುದರಿಂದ ಈ ನಿಟ್ಟಿನಲ್ಲಿ ಇದರ ಯಶಸ್ಸು ಹೆಚ್ಚೆಂದು ಹೇಳಬಹುದು. ಇದರಲ್ಲಿ ಇತರೆ ಗುಣಗಳು ಬೇಕಾದಷ್ಟಿವೆ. ಹಾಗೆ ನೋಡಿದರೆ "ಕನ್ನಡದಲ್ಲಿ ಈ ಮಾದರಿಯ ಚಿತ್ರಕಕಾವ್ಯ ಇನ್ನೊಂದಿಲ್ಲ."[1]

## ಐತಿಹಾಸಿಕ ಅಂಶಗಳು ಮತ್ತು ಸಮಕಾಲೀನ ಪ್ರಜ್ಞೆ

ಕನಕದಾಸರು ಕಾವ್ಯದುದ್ದಕ್ಕೂ ಶ್ರೀಕೃಷ್ಣನನ್ನು ಕರ್ನಾಟಕ ಸಾಮ್ರಾಜ್ಯದ ರಮಾರಮಣನೆನಿಸಿದ ಶ್ರೀಕೃಷ್ಣದೇವರಾಯ

1. ಬೆಟಗೇರಿಕೃಷ್ಣಶರ್ಮ, ಕನಕದಾಸರು ಚಿತ್ರಿಸಿದ ಜೀವನ, ಮಹಾತ್ಮ ಕನಕದಾಸ ಪ್ರಶಸ್ತಿ, ಪು. ೨೨.

ನೊಂದಿಗೆ ಅಭೇದ್ಯವಾಗಿ ಹೋಲಿಸಿರುವಂತೆ ಕಂಡುಬರುತ್ತದೆ. ಇಲ್ಲಿ ಪಂಪ ಪೊನ್ನ ರನ್ನರ ಪರಂಪರೆಯಲ್ಲಿ ಕವಿ ಸಾಗಿರುವುದು ಕಾಣುತ್ತದೆ. ಹರಿಶರಣರಚ್ಚಾದ ಈ ಕೃತಿಯನ್ನು ಕನಕದಾಸರು 'ಶ್ರೀಕೃಷ್ಣ ಚರಿತ್ರೆ' ಎಂದೇ ಕರೆದಿದ್ದಾರೆ. ಶ್ರೀಕೃಷ್ಣನ ದ್ವಾರಕೆ ಶ್ರೀಕೃಷ್ಣ ದೇವರಾಯನ ವಿಜಯನಗರದ ಪ್ರತಿಕೃತಿಯಾಗಿದೆ. ಕೃತಿ ಪೌರಾಣಿಕವಾದರೂ ಸಹ ಸಮಕಾಲೀನ ಜೀವನದ ಚಿತ್ರಣ ನಿಚ್ಚಳವಾಗಿದೆ. ಕನಕರು ಕಣ್ಣಾರೆ ಕಂಡ ಬಾಳ್ವೆ ಇಲ್ಲಿ ವ್ಯಾಪಿಸಿ ಕೊಂಡಿದೆ.

ರಸ್ತೆಯ ಇಕ್ಕೆಲಗಳಲ್ಲಿ ಸಾಲು ಮರಗಳು, ತುಂಬಿ ತುಳುಕುವ ಕೆರೆ, ಬಾವಿಗಳು, ಹರಿಯುವ ನದಿಗಳು, ಬೆಳೆದುನಿಂತ ತೋಟಗಳು, ಕಬ್ಬಿನ ಗದ್ದೆಗಳು, ಬೆಲ್ಲ ಸಕ್ಕರೆಯನ್ನು ತಯಾರಿಸುವ ಆಲೆಯ ಮನೆಗಳು, ಅತಿಥಿಗಳಿಂದ ತುಂಬಿರುವ ಧರ್ಮ ಛತ್ರಗಳು, ಅಗ್ರ ಹಾರಗಳು, ವೀರಮಾನ್ಯ ಪುರಗಳು ಅಂದಿನ ಕರ್ನಾಟಕದ ಚಿತ್ರ ವನ್ನು ಕಣ್ಣಿಗೆ ಕಟ್ಟುತ್ತವೆ. ದಾರಿಯ ಪಕ್ಕದ ಮರದ ನೆರಳಿನಲ್ಲಿ ಬೆಲ್ಲದ ಪಾನಕವನ್ನೂ, ಕೆನೆಮೊಸರುಗಳಿಂದ ಕೂಡಿದ ಬುತ್ತಿಯನ್ನೂ ಅಲ್ಲಲ್ಲೆ ಇಟ್ಟುಕೊಂಡು ಪಯಣಿಗರನ್ನು ಕರೆದು ಪ್ರೀತಿಯಿಂದ ಉಣಬಡಿಸುವ ಚಿತ್ರ ಕರ್ನಾಟಕದಲ್ಲಲ್ಲದೆ ಮತ್ತೆಲ್ಲಿ ಕಾಣಬೇಕು. ವಿಜಯನಗರದ ಕೋಟೆ ಕೊತ್ತಲಗಳು, ಅಂಗಡಿ ಸಾಲುಗಳು ಅಲ್ಲಿ ಚಿತ್ರಿತವಾಗಿವೆ. ಶ್ರೀಗಂಧ, ಬಿಳಿಯ ವಿಳ್ಳೇದೆಲೆ, ಹೂವು, ಕರ್ಪೂರ, ಕಸ್ತೂರಿ, ಜವಾಜಿ, ಪುನಗು, ಬಗೆ ಬಗೆಯ ಪರಿಮಳ ತೈಲ, ಹಣ್ಣು ಹಂಪಲುಗಳನ್ನು ಮಾರುವ ವಿವಿಧ ಅಂಗಡಿ ಸಾಲುಗಳು, ಧನಧಾನ್ಯಗಳ ಅಂಗಡಿ ಬೀದಿಗಳು, ಕಂಚುಗಾರ, ಕೈದುಗಾರ, ಸಂಚುಗಾರ ಮೊದಲಾದ ವೃತ್ತಿಗನುಗುಣವಾದ ಪ್ರತ್ಯೇಕ ಕೇರಿಗಳು ವಿಜಯನಗರದ ಇತಿಹಾಸವನ್ನು ಬಿಂಬಿಸು

ತ್ತವೆ: "ಸೋಮಸೂರಿಯ ವೀಧಿ–ವೀಧಿಯಿಕ್ಕೆಲದಲ್ಲಿ ಹೇಮ ನಿರ್ಮಿತ ಸೌಧದೋಳಿ" ಗಳು ಅಲ್ಲಿ ರಮಣೀಯವಾಗಿವೆ. ಬಟ್ಟೆ ಅಂಗಡಿಗಳು, ಹಣ ಹೊನ್ನಕುಪ್ಪೆಯ ಮುಂದಿಟ್ಟುಕೊಂಡವರು, ನೃತ್ಯ ಮೇಳದವರು, ಗಾಯಕಿಯರೂ ಅಲ್ಲುಂಟು.

ಇವುಗಳು ಕೇವಲ ಅಷ್ಟಾದಶ ವರ್ಣನೆಗೋಸ್ಕರ ತಂದ ವಿಷಯದ ಪಟ್ಟಿ ಆಗದೆ ರಸಮಯ ವರ್ಣನೆಗಳಾಗಿರುವುದು ಈ ಕೃತಿಯ ಹಿರಿಮೆಯೆಂದು ಹೇಳಬಹುದು. ಬಳೆಗಾರನ ಅಂಗಡಿಯ ಒಂದು ಚಿತ್ರ ಇದಕ್ಕೆ ಸಾಕ್ಷಿಯಾಗಿದೆ.

ಕಳೆವೆತ್ತ ವಾರನಾರಿಯರ ಕನ್ನಿಕೆಯರ
ಮೊಳೆ ಮೊಲೆಗಳ ನೋಡಿ ನಗುತ
ಎಳೆವೆರಲ್ಗಳ ಚಿಟುಕೊತ್ತಿ ಕೈದೊಡಿಸುವ
ಬಳೆಗಾರರಿರ್ದರಿಕ್ಕೆಲದಿ

ಇಂತಹ ರಚನೆಗಳು ಕನಕರನ್ನು ಯೋಗಿಯ ಸ್ಥಾನದಿಂದ ರಸ ಯೋಗಿಯ ಕಡೆಗೆ ಅಥವಾ ರಸಿಕ ಯೋಗಿಯ ಕಡೆಗೆ ಕರೆದೊಯ್ಯು ತ್ತವೆ. ಬ್ರಾಹ್ಮಣರ ಭೂರಿ ಭೋಜನವನ್ನು ಚಿತ್ರಿಸುವುದರಲ್ಲಿಯೂ ಕನಕದಾಸರು ಬಹುಶಃ ಅದ್ವಿತೀಯರೆನಿಸಿದ್ದಾರೆ. ಬಗೆ ಬಗೆಯ ಭಕ್ಷ್ಯಗಳನ್ನು ಬಾಯಲ್ಲಿ ನೀರೂರುವಂತೆ ಬಣ್ಣಿಸಿದ್ದಾರೆ.

ಮಲ್ಲಿಗೆಯರಳಂತೆ ಬಿಚ್ಚೋಗರ, ಮೊಸ
ರೊಳ್ಳೆಯ ಬಹುಳುಪ್ಪುಗಾಯಿ
ಗಲ್ಲಿಸಿ ಗಟ್ಟಿಯ ಕಟ್ಟಿದ ಪಿರಿಯರು
ಪುಲ್ಲಿಗೆಗಳು ತರತರಿಸೆ

ಎನ್ನುವಂತೆ ಊಟ ಮಾಡಿದರಂತೆ.

ವಿಜಯನಗರದ ಬೀದಿಗಳಲ್ಲಿ ನಡೆಯುತ್ತಿದ್ದ ಸಾಮಾನ್ಯ ಜನರ ವಿವಿಧ ಬಗೆಯ ಜೂಜುಗಳಲ್ಲಿ ಕಂಡುಂಬರುವ ಮೋಜನ್ನು

ಕನಕರು ಚೆನ್ನಾಗಿ ತಂದಿದ್ದಾರೆ. ಬೆಲ್ಲದ ಜೂಜೊಂದರಲ್ಲಿನ ರಸಿಕತೆ ಹೀಗಿದೆ:

ಬೆಲ್ಲವೆ ನೀ ಮುದ್ದುವೆಣ್ಗಳ ಮೃದುಬಾಯ
ಬೆಲ್ಲವಾಗಿರದೆ ಬಂದಿಲ್ಲಿ
ಹೊಲ್ಲೆಹ ನೊಣನ ಮುತ್ತಿಸಿಕೊಳಬೇಕೆಂದು
ಬೆಲ್ಲವನೊಡೆಯೆ ಗುದ್ದಿದರು.

ಕನಕರ ಕಾಲದಲ್ಲಿ ವಾರಾಂಗನೆಯರ ಸಂಸ್ಕೃತಿಯು ಮಟ್ಟ ಇಂದಿಗಿಂತ ಉತ್ತಮವಾಗಿತ್ತೆನ್ನುವಂತೆ ಕಾಣುತ್ತದೆ. ನೃತ್ಯ, ಗಾಯನ ಮತ್ತು ವಾದನ ಕಲೆಗಳಲ್ಲಿ ಅವರು ಪರಿಣತಿಯನ್ನು ಪಡೆದು ರಸಿಕರನ್ನು ರಂಜಿಸುತ್ತಿದ್ದರೆಂದು ಕನಕರು ಹೇಳುತ್ತಾರೆ. ಶ್ರೋತ್ರ ಸಂಪ್ರದಾಯಂದ ಇದು "ಒಂದು ಹೃದಯಸ್ಪರ್ಶಿ ಎನಿಸುವಂತಹ ವರ್ಣಕ ಕಾವ್ಯ. ಕರ್ಮಠ ಪಂಡಿತ ವರ್ಗ ಈ ಕೃತಿಯನ್ನು ಒಪ್ಪದಿರಬಹುದಾದರೂ ಸಹೃದಯರಾದ ಪಂಡಿತ ಪಾಮರ ಸಮೂಹದ ಮನಸ್ಸನ್ನು ಇದು ಆಕರ್ಷಿಸದೆ ಬಿಡದು."[1] ಕನಕದಾಸರ ಮಾತಿನಲ್ಲಿಯೇ ಹೇಳುವುದಾದರೆ 'ಪಟ್ಟೆಯ ದೋಣಿಯೊಳ್ ತುಂಬಿದ ರತ್ನ ಓಣಿಯೊಳ್ ಚೆಲ್ಲಿದಂತಿದೆ.'

ನಾಡೊಳಗುಳ್ಳ ಜಾಣರು ಜಾಣೆಯರೊಡ
ನಾಡುವ ಸವಿವಾತುಗಳ
ಪಾಡುಗಬ್ಬದ ಪರುಠನಿಸಿದ ಬಗೆ

ಯಲ್ಲಿ ಕಾವ್ಯ ರಚನೆಯಾಗಿದೆ. ಕಾವ್ಯದಲ್ಲಿನ ಭಾಷೆ–ಕನ್ನಡ ಮತ್ತು ಸಂಸ್ಕೃತ ಪದಗಳ ಹದವಾದ ಬೆರಕೆಯಿಂದಲೂ, ಗಾದೆ ಮಾತುಗಳ ಸೂಕ್ತ ಪ್ರಯೋಗಗಳಿಂದಲೂ, ದೇಶೀಯ ವಿಶಿಷ್ಟ ನುಡಿಕಟ್ಟುಗಳಿಂದಲೂ, ಉಪಮೆಗಳಿಂದಲೂ ಕೂಡಿ ಸುಂದರ

---

1. ಬೆಟಗೇರಿಕೃಷ್ಣಶರ್ಮ, ಕನಕದಾಸರು ಚಿತ್ರಿಸಿದ ಜನಜೀವನ, ಮಹಾತ್ಮ ಕನಕದಾಸ ಪ್ರಶಸ್ತಿ, ಪು. ೩೩.

ವಾಗಿದೆ. ಈ ಕೃತಿ ಕನಕರ ಕೃತಿಗಳಲ್ಲಿ ಗಾತ್ರದಲ್ಲಿ ದೊಡ್ಡ ದಾಗಿರುವುದು ಮಾತ್ರವಲ್ಲದೆ ಗುಣದಲ್ಲಿಯೂ ಸಹ ದೊಡ್ಡ ದಾಗಿದೆ. ಕನಕ ಪ್ರತಿಭೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಶಕ್ತಿಪೂರ್ಣ ವಾದುದು ಎಂಬುದನ್ನು ಇದು ನಿರೂಪಿಸುತ್ತದೆ.

## (ಆ) ರಾಮಧಾನ್ಯ ಚರಿತ್ರೆ

ಕನಕದಾಸರ ರಾಮಧಾನ್ಯ ಚರಿತ್ರೆಯನ್ನು ಓದಿದಾಗ 'ಗಾತ್ರ ವದು ಸೂತ್ರವಲ್ಲಾತ್ಮಕ್ಕೆ' ಎಂಬ ಶ್ರೀ ಕುವೆಂಪು ಅವರ ಸೂಕ್ತಿ ನೆನಪಿಗೆ ಬರುತ್ತದೆ. ಆಕೃತಿಯಲ್ಲಿ ಇದು ನೂರೈವತ್ತು ಭಾಮಿನಿ ಪದ್ಯಗಳ ನಲವತ್ತು ಪುಟಗಳ ಒಂದು ಪುಟ್ಟಕಾವ್ಯ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ಹೋಲಿಕೆ ಈ ಕೃತಿಗೆ ಅನ್ವರ್ಥವಾಗಿದೆ. ಕೃತಿಗೆ ಮಾತ್ರವಲ್ಲದೆ ಅದರಲ್ಲಿ ಪ್ರಧಾನ ಪಾತ್ರಧಾರಿಯಾದ ರಾಮಧಾನ್ಯಕ್ಕೆ (ರಾಗಿಗೆ) ಕೂಡ ಇದು ಅನ್ವ ಯಿಸುತ್ತದೆ. ಕನಕರ ಕೃತಿಗಳಲ್ಲೆಲ್ಲ ಇದು ಹೆಚ್ಚು ವೈಚಾರಿಕ ವಾದುದು ಮತ್ತು ವೈಜ್ಞಾನಿಕವಾದುದು. ಕನ್ನಡದ ಶ್ರೇಷ್ಠ ದರ್ಜೆಯ ವಿದ್ವಾಂಸರುಗಳು ಈ ಕೃತಿಯನ್ನು ಮುಕ್ತಮನಸ್ಸಿ ನಿಂದ ಕೊಂಡಾಡಿ ಅದರ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಿ ದ್ದಾರೆ. ಕೃತಿಯ ಹಿರಿಮೆಯನ್ನು ಹಲವು ರೀತಿಗಳಲ್ಲಿ ಗುರುತಿಸಿ ದ್ದಾರೆ.[1]

---

1. ಈ ಬಗ್ಗೆ ಹೆಚ್ಚು ತಿಳಿಯಲು ದೇಜಗೌ ಸಂಪಾದಿಸಿರುವ ರಾಮಧಾನ್ಯ ಚರಿತ್ರೆಯ ಪೀಠಿಕೆಯನ್ನು, 'ಸುನಂದಾಭಿನಂದನ' ಮತ್ತು 'ಕನಕಕಿರಣ' ಗಳಲ್ಲಿನ ಎಂ. ಚಿದಾನಂದಮೂರ್ತಿ ಅವರ 'ರಾಮಧಾನ್ಯ ಚರಿತ್ರೆ'ಯ ಸಾಮಾಜಿಕ ಧ್ವನಿ ಎಂಬ ಲೇಖನವನ್ನು, ಮಹಾತ್ಮ ಕನಕದಾಸ ಪ್ರಶಸ್ತಿಯಲ್ಲಿನ ಎಚ್. ಎಲ್. ನಾಗೇಗೌಡರ 'ಕನಕದಾಸರ ರಾಗಿ ರಾಮಾಯಣ' ಎಂಬ ಲೇಖನವನ್ನು ನೋಡಬಹುದು.

ನಳ ಚರಿತ್ರೆಯಲ್ಲಿ ರೋಮಶ ಮಹರ್ಷಿಗಳು ಧರ್ಮರಾಯನಿಗೆ ಆ ಕಥೆಯನ್ನು ಹೇಳಿದರೆಂದಿದ್ದರೆ ಇದರಲ್ಲಿ ಧರ್ಮರಾಯನಿಗೆ ಶಾಂಡಿಲ್ಯ ಮುನಿಯು ಶ್ರೀ ರಾಮಚಂದ್ರನ ವನವಾಸದ ಕಥೆಯನ್ನೂ ಆದರಲ್ಲಿ ನರೆದಲಗ ಮತ್ತು ವ್ರೀಹಿಯರ ಪ್ರಸಂಗವನ್ನೂ ಹೇಳಿದರೆಂದಿದೆ.

## ಕಥಾವಸ್ತು

ರಾವಣ ಸಂಹಾರದ ತರುವಾಯ ಶ್ರೀ ರಾಮನು ಅಯೋಧ್ಯೆಗೆ ಹಿಂದಿರುಗುವಾಗ ಮಾರ್ಗಮಧ್ಯದಲ್ಲಿ ಸೀತೆಗೆ ಸುಂದರವಾದ ದೃಶ್ಯಗಳನ್ನು ತೋರಿಸುತ್ತ, ಋಷ್ಯಾಶ್ರಮಗಳನ್ನು ಸಂದರ್ಶಿಸುತ್ತ ಬರುತ್ತಾನೆ. ಹಾಗೆ ಗೌತಮ ಋಷಿಗಳ ಆಶ್ರಮಕ್ಕೆ ಬಂದಾಗ ಅಲ್ಲಿ ಬಗೆ ಬಗೆಯ ಧಾನ್ಯಗಳಿಂದ ತಯಾರಿಸಿದ ವಿವಿಧ ಭಕ್ಷ್ಯಗಳ ಸಮಾರಾಧನೆಯಾಗುತ್ತದೆ. ಈ ಧಾನ್ಯಗಳ ಬಗ್ಗೆ ಮಾತುಕತೆಯಾದಾಗ ಗೌತಮ ನರೆದಲಗನ ಬಗ್ಗೆ ಪ್ರಶಂಸೆಯ ಮಾತನಾಡುತ್ತಾನೆ. ಆಗ ನರೆದಲಗ ಮತ್ತು ವ್ರೀಹಿಗಳೆರಡೂ ತಮ್ಮ ತಮ್ಮ ಶಕ್ತಿ ಪ್ರತಾಪ ಗುಣ ವಿಶೇಷಣಗಳನ್ನು ಹೇಳಿಕೊಂಡು ಜಗಳ ಕಾಯುತ್ತವೆ. ಆಗ ಶ್ರೀರಾಮ ಅವರಿಬ್ಬರನ್ನೂ ಸೆರೆಯಲ್ಲಿಟ್ಟು ಕೆಲಕಾಲದ ಬಳಿಕ ಅಯೋಧ್ಯೆಗೆ ಕರೆಸಿಕೊಂಡು ಯಾರು ಹೆಚ್ಚು ಶಕ್ತಿಶಾಲಿಗಳೆಂದು ತಿಳಿಸುವುದಾಗಿ ಹೇಳಿ ಪರಿವಾರ ಸಮೇತನಾಗಿ ಅಯೋಧ್ಯೆಯತ್ತ ತೆರಳುತ್ತಾನೆ.

ತನ್ನ ಪಟ್ಟಾಭಿಷೇಕ ಮುಗಿದ ಮೇಲೆ ಹನುಮನ ಮೂಲಕವಾಗಿ ಇವುಗಳನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಳ್ಳುತ್ತಾನೆ. ಆ ಸಭೆಯಲ್ಲಿ ಇಂದ್ರಾದಿ ದೇವತೆಗಳೂ, ಅನೇಕ ಮಹರ್ಷಿಗಳೂ ನೆರೆದಿರುತ್ತಾರೆ. ಅವುಗಳನ್ನು ಪರೀಕ್ಷಿಸಿ ನೋಡಲಾಗಿ ನರೆದಲಗ

ಮೊದಲಿನಂತೆಯೇ ಗಟ್ಟಿಮುಟ್ಟಾಗಿರುತ್ತದೆ. ನೆಲ್ಲು ಮುಗ್ಗಿ ಅಂದ ಗೆಟ್ಟಿರುತ್ತದೆ. ಇಂದ್ರಾದಿ ದೇವತೆಗಳೆಲ್ಲ ನರೆದಲಗನನ್ನು ಮುಕ್ತ ಮನಸ್ಸಿನಿಂದ ಕೊಂಡಾಡಿ ತಮ್ಮ ತಮ್ಮ ಶಕ್ತಿಗಳನ್ನು ಅನುಗ್ರಹಿಸಿ ಕೊಡುತ್ತಾರೆ. ಶ್ರೀರಾಮಚಂದ್ರನಾದರೋ ತನ್ನ ಹೆಸರನ್ನೇ ಅದಕ್ಕಿತ್ತು 'ರಾಘವ' ಎನ್ನುವ ಹೆಸರಿನಿಂದ ಖ್ಯಾತಿ ಪಡೆ ಎಂದು ಹರಸುತ್ತಾನೆ. ಕಳಾಹೀನವಾಗಿ ನಿಂತಿದ್ದ ನೆಲ್ಲನ್ನು ರಾಮ ಮಾತ್ರ ವಲ್ಲದೆ ರಾಗಿ ಕೂಡ ಸಮಾಧಾನ ಮಾಡಿ ತಮಿಳುನಾಡನ್ನು ಸಲಹು ಎಂದು ಕಳಿಸಿಕೊಡುತ್ತದೆ.

## ವಿಮರ್ಶೆ

ಒಂದು ಮಹತ್ತರವಾದ ಪೌರಾಣಿಕ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಈ ಪ್ರಸಂಗ ಆನೆಯು ಕಣ್ಣಿದ್ದಂತೆ. ರಾಗಿಯ ಮಹತ್ವವನ್ನು ಎತ್ತಿ ಹಿಡಿಯುವ ಉದ್ದೇಶದಿಂದಲೇ ಕನಕರು ಈ ಕಥೆಯನ್ನು ಸೃಷ್ಟಿಸಿರುವಂತೆ ಕಾಣುತ್ತದೆ. ನೆಲ್ಲು ಮತ್ತು ನರೆದಲಗಗಳ ವಾಗ್ವಾದದ ಹಿಂದಿರುವ ವಿಚಾರವೇ ಈ ಕಾವ್ಯದ ಸರ್ವಸ್ವ, ಅದಷ್ಟೇ ಸನ್ನಿವೇಶ ಒಂದು ಸ್ವತಂತ್ರ ಕೃತಿಯಾಗಿ ಉಳಿಯಬಲ್ಲದು. ಅದನ್ನು ಕತೆಯ ಕಟ್ಟಡದಲ್ಲಿ ಅಳವಡಿಸಿರುವುದರಿಂದ ಅದಕ್ಕೊಂದು ಕಲಾತ್ಮಕ ಶೋಭೆ ಉಂಟಾಗಿರುವುದು ಮಾತ್ರವಲ್ಲದೆ ಕೌತುಕತೆಯೂ ಒದಗಿದೆ.

ರಾಮಧಾನ್ಯ ಚರಿತೆಯನ್ನು ದಲಿತ ಧ್ವನಿಯ ಸುಂದರ ರೂಪಕ ಎಂದು ಕರೆಯಬಹುದು. ಕವಿಯ ಬಡವರ ಪ್ರೇಮ ಇಲ್ಲಿ ವ್ಯಕ್ತವಾಗಿದೆ. ಅಕ್ಕಿಗಿಂತ ರಾಗಿ ಶ್ರೇಷ್ಠ ಎಂದು ರಾಮನಿಂದಲೇ ಅಭಿದಾನ ಪಡೆಯುವ ಪ್ರಸಂಗ ತುಂಬ ಆಕರ್ಷಕವಾಗಿದೆ. ರಾಗಿ ಸಾಮಾನ್ಯ ಜನರ ಆಹಾರ. ಭತ್ತ ಸಿರಿವಂತರ ಸ್ವತ್ತು. ಇವೆರಡರ

ಮಧ್ಯೆ ನಡೆಯುವ ಜಗಳ ಅತ್ಯಂತ ಸ್ವಾರಸ್ಯವಾಗಿದೆ. ಅವುಗಳ ವಾದ ವಿವಾದದ ವೈಖರಿ ಮತ್ತು ಅಲ್ಲಿನ ತರ್ಕದ ಹಿಂದೆ ಅಡಗಿರುವ ಅರ್ಥ ಈ ಕಾವ್ಯದ ಹೆಗ್ಗಳಿಕೆ ಎಂದೇ ಹೇಳಬೇಕು. ರಾಮಧಾನ್ಯ ಚರಿತ್ರೆಯ ಕಥೆ ಕನಕರ ಸ್ವಂತ ಸೃಷ್ಟಿ. ಧಾನ್ಯಗಳನ್ನು ಮೊದಲಿಗೆ ಸಾಹಿತ್ಯದಲ್ಲಿ ಮಾತನಾಡಿಸಿದ್ದೂ ಅವರ ವಿಶಿಷ್ಟ ಪ್ರತಿಭೆಯೆ. ಮೂಕರಿಗೆ ಮಾತು ಕೊಟ್ಟ ಕನಕರ ದ್ರಷ್ಟಾರ ಪ್ರಜ್ಞೆ ದೊಡ್ಡದೆಂದೇ ಹೇಳಬೇಕು. ರಾಗಿಯ ಮಾತಿನಲ್ಲಿ ದುಡಿಮೆಗಾರನ ಧ್ವನಿ ಇದೆ. ನೊಂದವರ ಪ್ರತಿನಿಧಿಯಾಗಿ ಅದು ಕಂಡುಬರುತ್ತದೆ. ಇಲ್ಲಿ ಕನಕದಾಸರ ಸಾಮಾನ್ಯತಾ ಪ್ರಜ್ಞೆ ಸ್ಪಷ್ಟವಾಗಿ ಗೋಚರವಾಗುತ್ತದೆ. ಭತ್ತದ ಮಾತಿನಲ್ಲಿ ವ್ಯವಸ್ಥೆಯ ಪರವಾದ ಘೋಷಣೆಯಿದೆ, ಸಾಮಾನ್ಯರ ತುಚ್ಛೀಕರಣವಿದೆ. ಸಿರಿವಂತಿಕೆಯ ಮದವಿದೆ, ಮಡಿವಂತಿಕೆಯ ಅಹಂಭಾವವಿದೆ. ತಾನು ಮೇಲೆಂಬ ಕೀಳರಿಮೆ ಇದೆ. ಪುರೋಹಿತಶಾಹಿಯ ಪ್ರಚ್ಛನ್ನ ಸ್ವರೂಪ ಅಲ್ಲಿ ಎದ್ದು ಕಾಣುತ್ತದೆ. ರಾಗಿಯ ಪ್ರತಿಭಟನೆಯಲ್ಲಿ ಕ್ರಾಂತಿಯ ಸುಳುವಿದೆ. ಶ್ರೀ ಸಾಮಾನ್ಯನ ಜಾಗೃತಿಯಿದೆ. ಸ್ವಬಲದ ಆತ್ಮವಿಶ್ವಾಸವಿದೆ. ಎದೆಗುಂದದೆ ಹೋರಾಡುವ ಛಲವಿದೆ. ಇವುಗಳ ತಾರ್ಕಿಕ ಹೋರಾಟದ ಸಂದರ್ಭದಲ್ಲಿ ಕಂಡುಬರುವ ನಾಟಕೀಯತೆ, ಸಂಭಾಷಣೆಯ ಸೊಗಸು, ವೈಚಾರಿಕ ದೃಷ್ಟಿ ಅಪೂರ್ವವಾಗಿವೆ. ಕೊನೆಯಲ್ಲಿ ರಾಘವ ಇವುಗಳನ್ನು ಪರೀಕ್ಷೆಗೆ ಒಳಗುಮಾಡಿ ಭತ್ತಕ್ಕಿಂತ ರಾಗಿ ಸತ್ವಶಾಲಿಯಾದುದು ಎಂಬುದನ್ನು ನಿರೂಪಿಸಿ ಅದಕ್ಕೆ ರಾಘವ ಎಂಬ ತನ್ನ ಹೆಸರನ್ನೇ ಇಡುತ್ತಾನೆ. ರಾಘವ ಪದದ ಸಂಕ್ಷಿಪ್ತರೂಪವೇ ರಾಗಿ. ಇದಕ್ಕೆ ಕನಕದಾಸರು ಶ್ರೀ ರಾಮಧಾನ್ಯ ಚರಿತ್ರೆ ಎಂಬ ಸುಂದರವಾದ ಹೆಸರನ್ನಿಟ್ಟಿದ್ದಾರೆ. ಕೃತಿ ಚಿಕ್ಕದಾದರೂ ಅದರ ಅಂತಃಶಕ್ತಿ

ತುಂಬಾ ದೊಡ್ಡದು. ಕನಕರ ಕೀರ್ತಿಯನ್ನು ಅಮರವಾಗಿಸಿದ ಕೃತಿ ಇದು.

ಇಲ್ಲಿನ ಎರಡು ಪ್ರಮುಖ ಪಾತ್ರಧಾರಿಗಳಾದ ನೆಲ್ಲು ನರೆದಲ ಗಗಳ ಸಂಭಾಷಣೆಯನ್ನು ಪ್ರತ್ಯೇಕಿಸಿ ಜೋಡಿಸಿದರೆ ಇದನ್ನೊಂದು ಸುಂದರವಾದ ಧಾನ್ಯನಾಟಕವಾಗಿಸಬಹುದು.

ವ್ರೀಹಿಗ (ಭತ್ತ) :

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕ ನಿಳಿಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗು

ನರೆದಲಗ (ರಾಗಿ) :

ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀ (ನಹೆ) ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರ.........

ಭತ್ತ :

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿ ದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನ್...........

ರಾಗಿ :

ಸತ್ತ ದಿನದಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ತಪ್ಪದೆ ಮತ್ತೆ ವಾಯಸ ಕುಲವ ಕರಕರೆದು
ತುತ್ತನಿಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ

ಭತ್ತ :

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಭಕಾಲ ಸಕಲ ಭೂಸುರರ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗು......

ರಾಗಿ :

ಸತ್ತವರ ಪ್ರತಿಬಿಂಬ ರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ
ನೆತ್ತಿಯನು ಬಡಿಬಡಿದು ಕಡೆಯಲಿ
ತುತ್ತನಿಡವರು ಪಶುಗಳಿಗೆ ನೀ
ನೆತ್ತಿದೆಯೆಲಾ ತನುವ ಸುಡಬೇಕು......

ತುಂಬ ಸ್ವಾರಸ್ಯಪೂರ್ಣವಾದ ಈ ವಾಗ್ ವಿಲಾಸದಲ್ಲಿ ವ್ಯಂಗ್ಯ, ವಿಡಂಬನೆ ಮತ್ತು ಕಾಕು ನುಡಿಗಳು ತುಂಬಿವೆ. ಇಲ್ಲಿನ ಕವನಗಳಲ್ಲಿ ಸಂಭಾಷಣೆಯು ಸೊಗಸಿದೆ, ನಾಟಕೀಯತೆಯು ರಂಜಕತೆಯಿದೆ. ಅರ್ಥಬದ್ಧವಾದ ಒಂದೊಂದರ ಮಾತು ಕೇಳುವಾಗ ಅದೇ ಸರಿ ಎಂಬ ಭಾವನೆ ಬರುವ ತರ್ಕ ಕಲಾನೈಪುಣ್ಯವಿದೆ.

ನರೆದಲಗನ ಮಾತು ಅದರ ಮಟ್ಟಿಗೆ ಅದು ಸರಿಯಾಗಿಯೇ ಇದೆ. ವ್ರೀಹಿಗನ ವಾದದಲ್ಲೂ ತಪ್ಪಿಲ್ಲ. ಇಂತಹ ಸಂದರ್ಭಗಳಲ್ಲೇ ತೀರ್ಪಿನ ಅಗತ್ಯವಿರುವುದು. ಇಲ್ಲಿ ತೀರ್ಪುಗಾರ ಸ್ವಯಂ ಶ್ರೀ ರಾಮಚಂದ್ರ ! ಅವನಿಗೂ ಸತ್ಯವನ್ನು ಒಡನೆಯೇ ನಿರ್ಧರಿಸು ವುದು ಕಷ್ಟವಾಯಿತು. ಅದಕ್ಕಾಗಿಯೇ ಆತ ಅವುಗಳನ್ನು ಪ್ರಾಯೋಗಿಕ ಪರೀಕ್ಷೆಗೆ (Experimental examination) ಒಳಗು ಮಾಡಿದ. ಆರು ತಿಂಗಳು ಕಳೆದರೂ ಕಂದದೆ, ಕುಂದದೆ, ಬಣ್ಣಗಿಡದೆ ತನ್ನ ಸತ್ವವನ್ನು ಉಳಿಸಿಕೊಂಡ ರಾಗಿಯನ್ನು ಶ್ರೇಷ್ಠ ಧಾನ್ಯ ಎಂದು ತೀರ್ಪು ಕೊಟ್ಟದ್ದು ಎಲ್ಲರಿಗೂ ಸಮ್ಮತವೆ. ಅವು ಗಳನ್ನು ಒರೆಗೆ ಹಚ್ಚಿ ಅನಂತರ ತೀರ್ಪು ಕೊಡುವಲ್ಲಿ ರಾಮನ ನ್ಯಾಯಪ್ರಜ್ಞೆ ಮತ್ತು ನಾಯಕ ಗುಣ ವ್ಯಕ್ತವಾಗಿದೆ. ವ್ರೀಹಿ ಸೋತು ತಲೆತಗ್ಗಿಸುವುದು ಸಹಜವೆ. ಆದರೆ ಆ ಸಮಯದಲ್ಲಿ ರಾಗಿ ಅದನ್ನು ಸಮಾಧಾನಪಡಿಸುವಲ್ಲಿ ಉನ್ನತಿಕೆಯನ್ನು ಮೆರದಿದೆ. ಅದು ಭತ್ತವನ್ನು 'ನೀ ಚೋಳ ದೇಶವ ಸಲಹು' ಎಂದು ಹೇಳುತ್ತದೆ. ಇಂದಿಗೂ ತಮಿಳುನಾಡು ಭತ್ತಕ್ಕೂ ಭತ್ತದಿಂದ ತಯಾರಾದ ತಿನಿಸುಗಳಿಗೂ ಪ್ರಸಿದ್ಧ (ಇಡ್ಲಿ, ದೋಸೆ, ಪೊಂಗಲ್, ಇಡ್ಡಿಯಪ್ಪ ಮುಂತಾದುವು ತಮಿಳರ ತಯಾರಿಕೆಯ ವಿಶೇಷಗಳು). ತಮಿಳಿನಲ್ಲಿ "ಚೋಳನಾಡು ಸೋರುಡೈತ್ತು" ಎಂಬ ಗಾದೆಯೇ ಇದೆ. ಚೋಳನಾಡಿನ ತುಂಬ ಭತ್ತ ತುಂಬಿದೆ ಎಂದು ಇದರ ಅರ್ಥ. ಹಿಂದೆ ತಂಜಾವೂರು ಪ್ರಾಂತ್ಯಕ್ಕೆ ಚೋಳನಾಡು ಎಂದು ಕರೆಯುತ್ತಿದ್ದರು. ಕಾವೇರಿ ನದಿಯ ನೀರಿನ ಆಸರೆಯಿಂದ ಇಲ್ಲಿ ವ್ಯಾಪಕವಾಗಿ ಭತ್ತ ಬೆಳೆಯು ತ್ತಾರೆ. ಈಗಲೂ ಸಹ "ತಮಿಳ್‌ನಾಟಿನ್ ನೆರ್ ಕಳಂಜಿ ಉತು ತಂಜಾವೂರ್ ಮಾಣಿಲಾಂ' ಎಂಬ ಮಾತು ಪ್ರಸಿದ್ಧವಾಗಿದೆ.

ರಾಮನ ಹೆಸರನ್ನೆ ಪಡೆದ ರಾಗಿ ಕರ್ನಾಟಕದಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ಕರ್ನಾಟಕ ರಾಗಿರಾಜ್ಯ. ಈ ನಾಡಿನ ಬಹುಪಾಲು ಜನರ ಆಹಾರ ಇದು. ಬಡವರ ಪಾಲಿಗೆ ಸದಾ ಸಂಜೀವಿನಿ (ಸಕ್ಕರೆ ಕಾಯಿಲೆಗಳು ಹೆಚ್ಚಾದ ಮೇಲೆ ಶ್ರೀಮಂತರ ಪಾಲಿಗೆ ಸಹ ರಾಗಿಯೇ ಸಂಜೀವಿನಿ). ಹಿಂದೆ ಕೆರೆಕಟ್ಟೆಗಳ ಹೊರತಾಗಿ ಬೇರೆ ವ್ಯಾಪಕ ನೀರಾವರಿ ಆಸರೆಗಳಿಲ್ಲದ ಕಾರಣ ಕರ್ನಾಟಕದಲ್ಲಿ ಭತ್ತದ ಬೆಳೆ ತುಂಬಾ ಕಡಿಮೆಯಿತ್ತು. ಅಲ್ಪ ಸ್ವಲ್ಪವಿದ್ದರೆ ಅದು ಶ್ರೀಮಂತರ ಪಾಲು. ಹೀಗಾಗಿ ಅನ್ನ ಬಡವರ ಪಾಲಿಗೆ ಕನಸು. ಒಮ್ಮೊಮ್ಮೆ ಅದು ನೆಂಟರು ಬಂದಾಗ ಮಾತ್ರ ಬಡಿಸುವ ಆಕಸ್ಮಿಕ ವೈಭವದ ವಿಶೇಷ ವಸ್ತು. ಹೀಗಾಗಿ ರಾಗಿ ಮತ್ತು ಭತ್ತಗಳ ಅಂತರ–ಬಡವ ಮತ್ತು ಶ್ರೀಮಂತರ ನಡುವಿನ ಅಂತರವೇ ಆಗಿತ್ತು (ಕನಕದಾಸರು ನಿಜಕ್ಕೂ ಇದನ್ನು ಸಾಂಕೇತಿಕವಾಗಿ ತಂದಿದ್ದಾರೆ). ಭತ್ತವನ್ನು ನೀರಿಲ್ಲದೆ ಬೆಳೆಯಲು ಸಾಧ್ಯವೇ ಇಲ್ಲ. ರಾಗಿ ಆದರೆ ಹಾಗಲ್ಲ. ನೀರಿಲ್ಲದೆ ಮಾತ್ರವಲ್ಲ, ಕೆಲವು ಕಾಲ ಮಳೆ ಇಲ್ಲದೆ ಇದ್ದರೂ ತಡೆದುಕೊಳ್ಳುವ ತಾಕತ್ತು ಅದಕ್ಕುಂಟು. ರಾಗಿಯನ್ನು ಚೆಲ್ಲಿದಮೇಲೆ ಮಳೆ ಬರಲಿ ಬಾರದೆ ಇರಲಿ ತಾನು ಮಾತ್ರ ಅಷ್ಟೊ ಇಷ್ಟೊ ಬಂದು ಬಡವನ ಹೊಟ್ಟೆ ಕಾಯುತ್ತಿದೆ. ಅದಕ್ಕೆ ಇದನ್ನು ಬರಬೆಳೆ ಎಂದು ಕರೆಯುತ್ತಾರೆ. ರಾಗಿಯ ಹುಲ್ಲು ಪೂರ್ಣವಾಗಿ ತುಂಬಿದ್ದು ಗಟ್ಟಿಯಾಗಿರುತ್ತದೆ. ಭತ್ತದ ಹುಲ್ಲಿನ ಒಳಗೆ ಕೊಳವೆ ಇದ್ದು ಅದು ಟೊಳ್ಳಾಗಿರುತ್ತದೆ. ಸರಿಯಾದ ರೈತ ಈಗಲೂ ತನ್ನ ಎಮ್ಮೆಗಳಿಗೆ ಭತ್ತದ ಹುಲ್ಲು ಹಾಕುವುದಿಲ್ಲ. ರಾಗಿಯಕಡ್ಡಿ ಹಾಕುತ್ತಾನೆ. ಭತ್ತದ ಬೆಳೆ ಯಾವಾಗಲೂ ಬಾಗಿರುತ್ತದೆ, ರಾಗಿ ಹಾಗಲ್ಲ. ತೆನೆ ಎಷ್ಟೇ ದಪ್ಪ ಗಿದ್ದರೂ ತಲೆ ಎತ್ತಿ ನಿಂತಿರುತ್ತದೆ. ರಾಗಿ ವರ್ಷಗಟ್ಟಲೆ ಇಟ್ಟರು

ಕೆಡುವುದಿಲ್ಲ. ಭತ್ತ ಒಂದೇ ವರ್ಷಕ್ಕೆ ಮುಗ್ಗಿ ಬಿಡುತ್ತದೆ. ಅಲ್ಲದೆ ಮನುಷ್ಯರಿಗೆ ಕೂಡ ಕೆಲವು ಸಂದರ್ಭಗಳಲ್ಲಿ ಅಕ್ಕಿ ನಿಷಿದ್ಧ–ಮುಖ್ಯ ವಾಗಿ ಸಕ್ಕರೆ ಖಾಯಿಲೆ ಇರುವವರಿಗೆ–ನಿಷಿದ್ಧವೇನು ಹೆಚ್ಚು ತಿಂದರೆ ಅವರ ಹೆಣ ಸಿದ್ಧ. ರಾಗಿಯ ಬಳಕೆ ಆಗ ಅತ್ಯಗತ್ಯ. ಅಕ್ಕಿ ತಿಂದವ ಹಕ್ಕಿಯ ಹಾಗೆ ಎಂಬ ಗಾದೆಯೇ ಇದೆ. ಕರ್ನಾಟಕ ದವರಾದ ಕನಕದಾಸರು ಈ ವಿಚಾರಗಳನ್ನೆಲ್ಲ ಚೆನ್ನಾಗಿ ಅರಿತವ ರಾಗಿದ್ದರು. ರಾಗಿ ಇಷ್ಟೆಲ್ಲಾ ಶ್ರೇಷ್ಠ ಆಹಾರವಾಗಿದ್ದರೂ ಮೇಲುವರ್ಗದವರಿಗೆ ಅದರ ಬಗ್ಗೆ ತಾತ್ಸಾರವಿದ್ದುದನ್ನು ತಿಳಿದಿದ್ದರು. ಆಗ ಅವರು ರಾಗಿಯ ಮಹಿಮೆಯನ್ನು ಎತ್ತಿಹಿಡಿದು ಇವರಿಗೆಲ್ಲ ಸರಿಯಾದ ಪಾಠ ಕಲಿಸುವ ಎನಿಸಿರಬೇಕು. ಅಥವಾ ಜನಪದದಲ್ಲಿ ಬೇರು ಬಿಟ್ಟಿದ್ದ ಕಥೆಯೊಂದು ಮೇಲಿನ ಕಾರಣಕ್ಕಾಗಿ ತಮಗೆ ಮೆಚ್ಚುಗೆಯಾಗಿ ಅದಕ್ಕೊಂದು ವಿಶಿಷ್ಟ ರೀತಿಯ ಅಭಿವ್ಯಕ್ತಿಯನ್ನು ಒದಗಿಸಿರಲೂ ಸಾಕು.

ಮೇಲು ನೋಟಕ್ಕೆ ತಮಾಷೆಯಂತೆ ಕಾಣುವ ಈ ಕೃತಿಯ ಒಳಹೊಕ್ಕು ನೋಡಿದಾಗ ಜಾತಿ ಸಮಸ್ಯೆ, ವರ್ಗ ಸಂಘರ್ಷ ಮತ್ತು ಮನುಷ್ಯ–ಮನುಷ್ಯರ ಮಧ್ಯೆ ಬೆಳೆದ ತರತಮ ಭಾವಗಳ ಮೇಲೆ ಬೆಳಕು ಚೆಲ್ಲಿರುವುದನ್ನು ಕಾಣಬಹುದು. ಕೆಳವರ್ಗದಿಂದ ಬಂದ ಕನಕರು ತಮ್ಮ ಬಾಳಿನಲ್ಲಿ ಬಂದೊದಗಿದ ನೋವುಗಳಿಗೂ, ಅನುಭವಗಳಿಗೂ ಇಲ್ಲಿ ಅಭಿವ್ಯಕ್ತಿ ಒದಗಿಸಿದ್ದಾರೆಂದು ತಿಳಿಯ ಬಹುದು.

ಶ್ರೀ ಸಾಮಾನ್ಯನ ಪರವಾದ ಈ ಕೃತಿ ಜನಸಾಮಾನ್ಯರಲ್ಲಿ ಹೆಚ್ಚು ಪ್ರಚಾರ ಪಡೆಯದೆ ಇರುವುದು ಮಾತ್ರ ಒಂದು ದೊಡ್ಡ ಸೋಜಿಗವಾಗಿದೆ.

## (ಇ) ನಳಚರಿತ್ರೆ

ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯಂತೆಯನ್ನು ಪಡೆದ ಕೃತಿ 'ನಳ ಚರಿತ್ರೆ.' ಕನಕದಾಸರ ಕೃತಿಗಳಲ್ಲೆಲ್ಲ ಹೆಚ್ಚು ಸರಳವೂ ಸುಂದರವೂ ಆದ ರಸಕೃತಿ. ಪ್ರತಿ ಕನ್ನಡಿಗನ ಮನೆಮಾತಾಗಿರುವ ಗಮಕ ಕಾವ್ಯ ಇದು. ಶ್ರೀಸಾಮಾನ್ಯರ ಹೃನ್ಮನಗಳನ್ನು ಸೂರೆಗೊಂಡಿರುವ ಭಾಮಿನಿ ಕಾವ್ಯ.

'ವರಪೌರ' ಅಥವಾ ವರಪುರದರಸ ಚೆನ್ನಿಗರಾಯ' ಎಂದು ಈ ಕೃತಿಯು ಆರಂಭದಲ್ಲಿ ಸ್ತುತಿ ಇರುವುದರಿಂದಲೂ 'ವರಪುರದಾದಿ ಕೇಶವನ' ಮಂಗಳ ಪದ್ಯದಿಂದ ಮುಕ್ತಾಯವಾಗುವುದರಿಂದಲೂ, ಕೃತಿಯು ಆಂತರಿಕ ಆಧಾರಗಳಿಂದಲೂ ಇದು ಕನಕದಾಸರು ರಚಿಸಿದ್ದು ಎಂದು ತಿಳಿಯಲಾಗಿದೆ. ವ್ಯಾಸಭಾರತದ ವನಪರ್ವ ದಲ್ಲಿ ಇಪ್ಪತ್ತೆಂಟು ಅಧ್ಯಾಯಗಳಲ್ಲಿ ವಿಸ್ತೃತವಾಗಿ ಹರಡಿರುವ ನಳೋಪಖ್ಯಾನವನ್ನು ಆಧರಿಸಿ ಕನ್ನಡದಲ್ಲಿ ಎರಡು ನಳಕಥಾ ಕಾವ್ಯಗಳು ರಚನೆಯಾಗಿವೆ.

ಹನ್ನೆರಡು–ಹದಿಮೂರನೆಯ ಶತಮಾನದಲ್ಲಿದ್ದಂಥ ಚೌಂಡರಸ ಕವಿಯ 'ನಳಚಂಪೂ' ಎಂಬ ಚಂಪೂಕೃತಿ ಒಂದಿದೆ. ನಳಚಂಪು ಆದರ ಛಂದೋಬದ್ಧಕ್ಕನುಸಾರಿಯಾಗಿ ಬಿಗಿಕಾವ್ಯ, ವರ್ಣನೆಗಳು ಅನಗತ್ಯ ಎನ್ನುವಷ್ಟು ಹೆಚ್ಚಾಗಿವೆ. ಎರಡನೆಯ ಕೃತಿಯೆ ಕನಕದಾಸರ ನಳಚರಿತ್ರೆ. ಇದರ ಅನಂತವಾದ ಖ್ಯಾತಿಗೆ ಇದರಲ್ಲಿನ ಕುತೂಹಲಪೂರ್ಣವಾದ ಕಥಾಸ್ವರೂಪ ಮತ್ತು ಅದರ ಅಭಿವ್ಯಕ್ತಿ ಮಾಧ್ಯಮವಾದ ಭಾಮಿನಿ ಬಂಧ ಕಾರಣವೆಂದು ಕಾಣುತ್ತದೆ. ನಳಚಂಪುವಿನಲ್ಲಿ ಬೃಹದಶ್ವನು ಈ ಕಥೆಯನ್ನು ಹೇಳಿದ ಎಂದಿದೆ. ಕನಕರಲ್ಲಿ ರೋಮಶ ಮಹರ್ಷಿ ಹೇಳಿದ್ದು ಎಂದಿದೆ. ಜೂಜಿನಲ್ಲಿ ಸೋತು ವನವಾಸಕ್ಕೆ ಒಳಗಾದ ಧರ್ಮರಾಯ ತನ್ನಂತೆ ಇಂತಹ

ಕಷ್ಟಕ್ಕೆ ಒಳಗಾದವರುಂಟೆ? ಎಂದು ದುಃಖಿಸುತ್ತಿರುವಾಗ ರೋಮಶ ಋಷಿಗಳು ಆತನಿಗೆ ನಳಚರಿತ್ರೆಯ ಕಥೆಯನ್ನು ಹೇಳುತ್ತಾರೆ.

## ಕಥೆಯ ಹಿಡಿಗಟ್ಟು

ನಳ ನಿಷದ ದೇಶದ ದೊರೆ. ವಿದರ್ಭ ದೇಶದ ಭೀಮಸೇನನ ಮಗಳು ದಮಯಂತಿ. ಇಬ್ಬರೂ ಅನುಪಮ ರೂಪ ಗುಣಶೀಲ ವುಳ್ಳವರು, ಪರಸ್ಪರ ಅನುರಕ್ತರು. ಇದಕ್ಕೆ ಅರಸಂಚೆಗಳ ರಾಯಭಾರ; ನಳದಮಯಂತಿಯರ ಸ್ವಯಂವರ. ಆದರೆ ಇದಕ್ಕೆ ಮುಂಚೆಯೇ ಅವಳನ್ನು ಒಲಿಸಿಕೊಳ್ಳಲು ಇಂದ್ರಾದಿ ದೇವತೆಗಳ ಪ್ರಯತ್ನ. ಅದೂ ನಳನ ಮೂಲಕವಾಗಿಯೇ! ಆದರೆ ದಮಯಂತಿ ನಳನಲ್ಲಿಟ್ಟ ಪ್ರೇಮದ ಮುಂದೆ ಅವೆಲ್ಲ ನಿಷ್ಫಲ. ಅಷ್ಟದಿಕ್ಪಾಲಕ ರನ್ನು ಬಿಟ್ಟು ದಮಯಂತಿ ಒರಿಸಿದ್ದು ನಳನನ್ನೇ. ನಳನ ಮೇಲೆ ಕಲಿಯ ವಕ್ರದೃಷ್ಟಿ, ತತ್ಪರಿಣಾಮವಾಗಿ ನಳ ಜೂಜಿನಲ್ಲಿ ಪುಷ್ಕರ ನಿಗೆ ಸೋತು ದೇಶಕೋಶಗಳನ್ನು ಕಳೆದುಕೊಂಡು ದಮಯಂತಿ ಯೊಂದಿಗೆ ವನವಾಸ, ಉಟ್ಟ ಬಟ್ಟೆಯನ್ನೂ ಕಳೆದುಕೊಂಡ ನಿರ್ವಾಣ ಸ್ಥಿತಿ. ನಳ ಕಾಡಿನಲ್ಲಿ ದಮಯಂತಿಯನ್ನು ತೊರೆಯುವುದು, ದುಃಖಿತೆಯಾದ ಅವಳು ಹಾವು ಮತ್ತು ಪುಳಿಂದರಿಂದ ತಪ್ಪಿಸಿಕೊಂಡು ಚೈದ್ಯ ನಗರಿಯನ್ನು ಸೇರುವುದು.

ಮಗಳು ಅಲ್ಲಿರುವ ಸುದ್ದಿಯನ್ನು ತಿಳಿದು ಭೀಮನೃಪಾಲ ಅವಳನ್ನು ತನ್ನಲ್ಲಿಗೆ ಬರಮಾಡಿಕೊಂಡ. ಇತ್ತ ನಳನನ್ನು ಕಾರ್ಕೋಟಕ ಸರ್ಪ ಕಚ್ಚಿತು. ಅವನ ರೂಪು ಭಯಂಕರ ವಿಕಾರ ವಾಯಿತು. ಆತ ಅಯೋಧ್ಯೆಯ ದೊರೆ ಋತಪರ್ಣನಲ್ಲಿ ಬಾಹುಕನೆಂಬ ಸಾರಥಿಯಾಗಿ ಸೇರಿಕೊಂಡ ಸುದ್ದಿ ವಿದರ್ಭಕ್ಕೆ

ಮುಟ್ಟಿತು. ದಮಯಂತಿಗೆ ಮರುವಿವಾಹವೆಂಬ ನೆಪದಲ್ಲಿ ನಳನನ್ನು ಅಲ್ಲಿಗೆ ಕರಸಿಕೊಳ್ಳಲಾಯಿತು. ದಾರಿಯಲ್ಲಿ ನಳ ಋತುಪರ್ಣನಿಗೆ ಅಶ್ವವಿದ್ಯೆಯನ್ನು ಹೇಳಿಕೊಟ್ಟು ಅವನಿಂದ ಅಕ್ಷ ವಿದ್ಯೆಯನ್ನು ಕಲಿತ. ಪತಿವ್ರತೆಯಾದ ದಮಯಂತಿ ನಳನನ್ನು ಪರೀಕ್ಷಿಸಿ ಅವನು ತನ್ನ ಗಂಡನೆಂದು ಖಚಿತಪಡಿಸಿಕೊಂಡಳು. ನಳದಮಯಂತಿಯರ ಕಷ್ಟ ತೊಲಗಿ ಇಬ್ಬರೂ ಒಂದಾದರು. ನಳ ಒಂದು ವರ್ಷದವರೆಗೆ ಮಾವನ ಮನೆಯಲ್ಲಿದ್ದ. ತರುವಾಯ ಪುಷ್ಕರನನ್ನು ಸೋಲಿಸಿ ರಾಜ್ಯವನ್ನು ಮರಳಿ ಪಡೆದ. ಪತಿ ಪತ್ನಿಯರು ಸುಖವಾಗಿದ್ದರು.

## ವಿಮರ್ಶೆ

ನಳಚರಿತ್ರೆಯ ಕಥೆ ಭಾರತೀಯ ಧರ್ಮದ ಪವಿತ್ರ ಸಂಸ್ಕೃತಿಯ ತಳಹದಿಯ ಮೇಲೆ ನಿಂತಿರುವಂತಹದು. ಪರಿಶುದ್ಧ ಪ್ರೇಮ ಮತ್ತು ಪಾತಿವ್ರತ್ಯ ಧರ್ಮಗಳನ್ನು ಅನನ್ಯ ರೀತಿಯಲ್ಲಿ ಪ್ರತಿಬಿಂಬಿಸಿರುವಂತಹದು. ಬಹುಶಃ ಸತಿಸಾವಿತ್ರಿಯ ಕಥೆಯನ್ನು ಬಿಟ್ಟರೆ ಬೇರಾವುದೇ ಕಥೆ ಈ ಮಟ್ಟಕ್ಕೆ ಬರಲಾರದೆಂದು ಕಾಣುತ್ತದೆ. ಇಲ್ಲಿ ದಮಯಂತಿಗೆ ನಳನ ಬಗ್ಗೆ ಇದ್ದ ಪ್ರೇಮ ಯಾವ ಕಾರಣಕ್ಕೂ ಯಾವ ಸಂದರ್ಭದಲ್ಲಿಯೂ ಕಲುಷಿತಗೊಳ್ಳದೆ, ಚ್ಯುತವಾಗದೆ ಉಳಿಯುತ್ತದೆ. ಈ ಪ್ರೇಮ ಮತ್ತು ಪಾತಿವ್ರತ್ಯದ ಪ್ರಕಾಶಕ್ಕೆ ವಿಧಿ ಒಂದು ಸಮರ್ಥ ಮಾಧ್ಯಮವಾಗಿ ಬರುತ್ತದೆ. ಸತ್ಯವಂತರು ಏನೇ ಕಷ್ಟ ಬಂದರೂ ಪಥಭ್ರಾಂತರಾಗುವುದಿಲ್ಲ ಎಂಬುದನ್ನು ಇದು ನಿರೂಪಿಸುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಮಾನವತ್ವ ದೇವತ್ವವನ್ನು ಮೀರಿ ನಿಲ್ಲುವ ಘಟನೆ ಕೃತಿಯ ಮಹತ್ವದ ಅಂಶವಾಗುತ್ತದೆ. ಸೂಕ್ಷ್ಮವಾಗಿ ನೋಡಿದಾಗ

ಕನಕದಾಸರ ಮೋಹನ ತರಂಗಿಣಿಯಲ್ಲೂ ಇದು ವ್ಯಕ್ತವಾಗಿದೆ. ನಳನಿಗೆ ಒಲಿದಿದ್ದ ದಮಯಂತಿಯನ್ನು ತಮಗೆ ಒಲಿಯುವಂತೆ ಮಾಡೆಂದು ನಳನನ್ನು ಕೇಳುವಾಗ ದೇವತೆಗಳು ತಮ್ಮ ದೇವತ್ವದ ಉನ್ನತಿಕೆಯನ್ನು ಕಳೆದುಕೊಂಡು ಅಲ್ಪರಾಗುತ್ತಾರೆ. ನಳ ತನ್ನ ಅನುಪಮ ಉದಾರ ಗುಣದಿಂದ ಮಾನವರ ಘನತೆಯನ್ನು ತುಂಬ ಉನ್ನತಿಗೆ ಕೊಂಡೊಯ್ಯುತ್ತಾನೆ. ದಮಯಂತಿಯಾದರೊ ದೇವತೆಗಳೇ ಒಲಿದು ಬಂದರೂ ಸಹ ಅವರಿಗೆ ಆಸೆ ಪಡದೆ ತಾನು ಮೊದಲು ಪ್ರೀತಿಸಿದ ನಳನನ್ನೇ ಮದುವೆಯಾಗಲು ನಿರ್ಧರಿಸುತ್ತಾಳೆ (ಇಲ್ಲಿ ಅಹಲ್ಯೆಗೂ ದಮಯಂತಿಗೂ ಇರುವ ಅಂತರವನ್ನು ನೆನೆಯಬಹುದು). ದಮಯಂತಿ ತನ್ನ ಬಾಳಿನುದ್ದಕ್ಕೂ ತ್ಯಾಗದ ಪ್ರತಿಮೂರ್ತಿಯಾಗಿ ಕಂಡುಬರುತ್ತಾಳೆ. ನಳ ಪುಷ್ಕರನಿಗೆ ಜೂಜಿನಲ್ಲಿ ಸೋತು ಎಲ್ಲವನ್ನು ಕಳೆದುಕೊಂಡಾಗ ಸಹ ಈಕೆ ತುಟಿಪಿಟಕ್ ಎನ್ನುವುದಿಲ್ಲ. ವನವಾಸದಲ್ಲಿ ತನ್ನ ಜೊತೆಯಲ್ಲಿದ್ದು ಕಷ್ಟಪಡುವುದು ಬೇಡ ತವರು ಮನೆಗೆ ಹೋಗು ಅಲ್ಲಿ ಸುಖ ವಾಗಿರಲು ಸಾಧ್ಯ ಎಂದು ನಳ ಹೇಳಿದಾಗ ದಮಯಂತಿ ದುಃಖದಿಂದ

ನೆಳಲು ತನುವಿನ ಬಳಿಯಲಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ

ಎಂದು ಹೇಳುತ್ತಾಳೆ. 'ಎಲ್ಲರೋಪಾದಿಯ ಪತಿವ್ರತೆಯಲ್ಲವೀ ದಮಯಂತಿ' ಎಂದು ಬಗೆದ ನಳ ಅವಳು ತಂದೆಯ ಮನೆಗೆ ಹೋಗಲಿ ಎಂಬ ಉದ್ದೇಶದಿಂದ ಅರಣ್ಯದಲ್ಲಿ ತೊರೆದು ಬಿಡು ತ್ತಾನೆ (ಉದ್ದೇಶ ಏನೇ ಇದ್ದರೂ ಒಲಿದ ಸತಿಯನ್ನು ಕ್ರೂರ ಮೃಗಗಳಿರುವ ಘೋರಾರಣ್ಯದ ಮಧ್ಯೆ ಒಂಟಿಯಾಗಿ ತೊರೆದು

ಹೋಗುವುದು ವಿವೇಚನೆಯ ಕಾರ್ಯವಲ್ಲ). ಆಗಲೂ ಸಹ ಆಕೆ ಗಂಡನ ಬಗ್ಗೆ ಕೆಡುನುಡಿಗಳನ್ನಾಡುವುದಿಲ್ಲ. ನಳನಿಲ್ಲದ ದಮಯಂತಿ ಹಾವಿನ ಬಾಯಿಗೆ, ಬೇಡನ ಪೀಡೆಗೆ ಒಳಗಾಗುತ್ತಾಳೆ. ಆದರೆ ಯಾವುದೇ ಹಂತದಲ್ಲೂ ಆಕೆ ಪತಿಯ ಮೇಲಣ ಪ್ರೇಮವನ್ನು ಕಳೆದುಕೊಳ್ಳುವುದಿಲ್ಲ. ದ್ರೌಪದಿಯಾದರೂ ತನ್ನ ಗಂಡಂದಿರನ್ನು ಆಗಾಗ್ಗೆ ಛೇಡಿಸುತ್ತಿದ್ದುದುಂಟು. 'ಗಂಡರೋ ನೀವು ಭಂಡರೋ' ಎಂದದ್ದೂ ಉಂಟು. ಐದು ಜನ ಲೋಕೈಕ ವೀರರು ಗಂಡಂದಿರಾಗಿದ್ದರೂ ಒಂದು ಹಂತದಲ್ಲಿ ಕರ್ಣನನ್ನೂ ಆಸೆಪಟ್ಟದ್ದುಂಟು. ಆದರೆ ದಮಯಂತಿಯ ಬಾಳಿನಲ್ಲಿ ಇಂತಹ ಒಂದು ಕಿಂಚಿತ್ ಆರಕೊರೆಯೂ ಇಲ್ಲ. ಪಂಚಮಹಾಪತಿವ್ರತೆಯರನ್ನೂ ಮೀರಿಸಿ ನಿಂತ ಮಹಾ ಸಾಧ್ವೀ ಈಕೆ.

ಕೊನೆಗೆ ಉಪಾಯದಿಂದ ತನ್ನ ಗಂಡನನ್ನು ತನ್ನ ತೌರುನಾಡಿಗೆ ಕರೆಸಿಕೊಂಡಾಗ ಅವನಿದ್ದ ಸ್ಥಿತಿ ಇದು :

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡುರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿ ತನದಲಿ ನೃಪತಿ

ಇದ್ದನಂತೆ. ಹೀಗಿದ್ದರೂ ಅವಳು ಅಸಹ್ಯ ಪಡದೆ ತುಂಬು ಪ್ರೀತಿಯಿಂದ ಅವನನ್ನು ಸ್ವೀಕರಿಸುತ್ತಾಳೆ. ಹೀಗಾಗಿ ದಮಯಂತಿ ಪಾತಿವ್ರತ್ಯದ ಒಂದು ದಿವ್ಯ ತೇಜಸ್ಸು. ನಳಚರಿತ್ರೆ ಪ್ರೇಮ ಪತಾಕೆಯನ್ನು ನಭಕ್ಕೆತ್ತಿದ ಒಂದು ಅಮರ ಕೃತಿ.

ನಳಚರಿತ್ರೆಯ ಭಾಷೆ ಮತ್ತು ಶೈಲಿಗಳು 'ಸುಲಿದ ಬಾಳೆಯ

ಹಣ್ಣಿನಂದದಿ' ರುಚಿಕರ. ಸಂಸ್ಕೃತ ಪದಗಳ ಅನಗತ್ಯ ಹಾವಳಿ ಇಲ್ಲದೆ ಹಿತಮಿತವಾದ, ಲಲಿತವಾದ ಕನ್ನಡದಲ್ಲಿ ಭಾಮಿನಿಯ ಲಯದಲ್ಲಿ ಕೃತಿ ರೂಪುಗೊಂಡಿದೆ. ಕಲಿತವರಿಗೂ ಕಲಿಯದವರಿಗೂ ಕಾಮಧೇನು ಎನ್ನುವ ಮಾತು ನಳಚರಿತ್ರೆಗೆ ನಿರ್ವಿವಾದವಾಗಿ ಒಪ್ಪುತ್ತದೆ.

## (ಈ) ಹರಿಭಕ್ತಿಸಾರ

ಹೆಸರೇ ಸೂಚಿಸುವಂತೆ ಇದು ಹರಿಭಕ್ತಿಯ ಸ್ವರೂಪವನ್ನು ತಿಳಿಸುವಂತಹುದು. ಇಲ್ಲಿ ಹರಿಯ ಬಗ್ಗೆ ಕವಿಯ ಭಕ್ತಿ ಕೋಡಿ ಬಿದ್ದಿದೆ. ಹೀಗಾಗಿ ಕೃತಿ ಕನಕದಾಸರ ಭಕ್ತಿಯ ಪ್ರತಿಕೃತಿಯಾಗಿದೆ. ಒಳಹೂರಣದಲ್ಲಿ ಕೀರ್ತನೆಗಳಿಗೂ ಇವುಗಳಿಗೂ ಅಂತಹ ವ್ಯತ್ಯಾಸ ವೇನೂ ಇಲ್ಲ. ಎರಡರಲ್ಲೂ ಹರಿಯ ಲೀಲಾ ವಿಲಾಸಗಳನ್ನು ಬಗೆ ಬಗೆಯಲ್ಲಿ ಬಣ್ಣಿಸುವ ಭಕ್ತಿಯೇ ಸ್ಥಾಯಿ. ಆದರೆ ರೂಪಾಂಶ ದಲ್ಲಿ ಇದು ಶತಕವನ್ನು ಹೋಲುತ್ತದೆ. ವಾಸ್ತವವಾಗಿ ಇಲ್ಲಿ ೧೧೦ ಭಾಮಿನಿ ಪದ್ಯಗಳಿವೆ. ಆದರೆ ಇದು ಶತಕವಾದ್ದರಿಂದ ಉಳಿದ ಹತ್ತು ಪದ್ಯಗಳು ಪ್ರಕ್ಷಿಪ್ತವಿರಬೇಕೆಂದು ಬೇಲೂರು ಕೇಶವದಾಸರು ಅಭಿಪ್ರಾಯಪಡುತ್ತಾರೆ.

ಹರಿಭಕ್ತಿಸಾರ ಶತಕವಾಗಿ ಹೆಸರು ಮಾಡಿದ ಕೃತಿ. ಕನಕದಾಸರ ತರುವಾಯ ಬಂದ ಚಂದ್ರಸಾಗರವರ್ಣಿಯ 'ಜಿನ ಭಕ್ತಿಸಾರ,' ರಾಮಬ್ರಹ್ಮಾನಂದ ಯೋಗಿಯ 'ಭಕ್ತಿ ಸುಧಾರಸ,' ದೇವಲಾ ಪುರದ ನಂಜುಂಡನ 'ಕೃಷ್ಣರಾಜ ಭಕ್ತಿಸಾರ'–ಮುಂತಾದ ಕೃತಿಗಳ ಮೇಲೆ ಹರಿಭಕ್ತಿಸಾರದ ಪ್ರಭಾವವಾಗಿದೆ ಎಂದು ಟಿ.ವಿ. ವೆಂಕಟಾ ಚಲ ಶಾಸ್ತ್ರಿಗಳು ಗುರುತಿಸಿದ್ದಾರೆ.[1]

---

1. ನೋಡಿ: ವೆಂಕಟಾಚಲಶಾಸ್ತ್ರಿ, ಟಿ. ವಿ., ಕನಕಕಿರಣ, ೧೯೮೨, ಪು. ೧೪೫

ಸಾಮಾನ್ಯವಾಗಿ ಶತಕಗಳು ನೀತಿ ಮತ್ತು ತತ್ತ್ವಗಳನ್ನು ಪ್ರತಿ
ಪಾದಿಸುವಂತಹವುಗಳು. ವಿಶದವಾದ ಕತೆಗಳಿಗೆ ಅಲ್ಲಿ ಆಸ್ಪದ
ವಿಲ್ಲ. ಕವಿಯ ವೈಯಕ್ತಿಕ ಭಾವನೆಗಳು ಮತ್ತು ಆಶಯಗಳು
ಇಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಹರಿಭಕ್ತಿ ವಿವಿಧ ಮಜಲುಗಳಲ್ಲಿ
ಕವಲೊಡೆದು ರೂಪ ತಾಳಿದೆ. ಸತ್ಯ ಧರ್ಮ ಮುಂತಾದ ಜೀವನ
ಮೌಲ್ಯಗಳು ಅದರ ಹಿನ್ನೆಲೆಯಲ್ಲಿವೆ. ಜೀವನದ ಅನಿಶ್ಚತೆ ಮತ್ತು
ದೇಹದ ಅನಿಶ್ಚತೆಗೆ ಅವು ಒತ್ತು ಕೊಡುತ್ತವೆ. ಶರೀರ ಭಗವಂತನ
ಅಸ್ತಿತ್ವದಿಂದಾಗಿ ಅಷ್ಟು ಸುಂದರವಾಗಿದೆ. ಪರಮಾತ್ಮ ಅಲ್ಲಿಂದ
ಮರೆಯಾದೊಡನೆ ಅದು ಕೊಳೆತು ನಾರುವ ವಸ್ತು. ದೇಹ
ಸುಸ್ಥಿತಿಯಲ್ಲಿರುವಾಗಲೆ ಭಗವತಾರಾಧನೆಯನ್ನು ಮಾಡಿ ಪಾಪ
ವನ್ನು ಪರಿಹರಿಸಿಕೊಳ್ಳಬೇಕು ಎಂಬುದು ಇಲ್ಲಿನ ಕವಿಯ ದರ್ಶನ
ವಾಗಿದೆ. ಕೆಲವು ಕಡೆ ಬಸವೇಶ್ವರ ಮೊದಲಾದವರ ವಚನಗಳ
ಪ್ರಭಾವವನ್ನೂ ಕಾಣಬಹುದು.

ಸರಳ ಸುಂದರವಾದ ಇಲ್ಲಿನ ಪ್ರಾರ್ಥನೆಗಳಲ್ಲಿ ಭಕ್ತನ ಹಾರ್ದ
ವಾದ, ಆರ್ದ್ರವಾದ ಆತ್ಮ ನಿವೇದನೆಯಿದೆ.

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೆ ದೇವ ರಕ್ಷಿಸು ನಮ್ಮನನವರತ

ಎನ್ನುವ ಈ ದೈವಭಕ್ತಿಯಲ್ಲಿ ಅಹಂಕಾರದ ನಿರಶನವಿದೆ. ಶುಷ್ಕ
ಪಂಡಿತಿಕೆಯನ್ನು ವಿಡಂಬಿಸುವ ಕನಕರು ಬಾಹ್ಯಶುದ್ಧಿಗಿಂತ
ಅಂತರಂಗದ ಶುದ್ಧಿಗೆ ಒತ್ತುಕೊಟ್ಟಿದ್ದಾರೆ.

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ
ಎಂಜಲನ್ನಿಸದೆ ಎಂಜಲೆಲ್ಲಿಯದು

ಎಂದು ಪ್ರಶ್ನಿಸಿ, ಮಾಡಿದ ಪಾಪ ಬರಿಯ ನೀರಿನಲ್ಲಿ ಮುಳುಗು ವುದರಿಂದ ಹೋಗುವುದಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಹರಿಸ್ತುತಿಗಳಾಗಿರುವ ಇಲ್ಲಿನ ಶತಕಗಳಲ್ಲಿ ಆಧ್ಯಾತ್ಮದ ಪ್ರಬಲ ಧ್ವನಿಗಳನ್ನು ಗುರುತಿಸಬಹುದು. ಲೌಕಿಕ ಜೀವನದ ನಶ್ವರತೆ ಯಿಂದ ಪಾರಾಗಿ ಶಾಶ್ವತ ಮುಕ್ತಿಯನ್ನು ಗಳಿಸುವಲ್ಲಿ ಮಾನವನ ಸಾಧನೆಯಿರಬೇಕು ಎಂಬ ಭಾವ ಇಲ್ಲಿನ ಅನೇಕ ಪದಗಳಲ್ಲಿ ವ್ಯಕ್ತ ವಾಗಿದೆ. ಹರಿಭಕ್ತಿಯ ವಿವಿಧ ಲೀಲಾಶಕ್ತಿಗಳನ್ನು, ವಿಷ್ಣುವಿನ ಸರ್ವೋತ್ತಮತ್ವವನ್ನು ಪೌರಾಣಿಕ ಚಿತ್ರಗಳ ಮೂಲಕ ಕಡೆದಿದ್ದಾರೆ. ಹೀಗಿದ್ದರೂ ಸಹ ಹರಿಹರ ಬ್ರಹ್ಮಾದಿಗಳು ಒಂದೇ ಶಕ್ತಿಯ ಮೂರು ರೂಪಗಳು ಎನ್ನುವ ಭಾಗವತ ಧೋರಣೆಯನ್ನು ಕಳೆದುಕೊಂಡಿಲ್ಲ.

ಪ್ರತಿ ಪದದ ಕೊನೆಯಲ್ಲಿ ಬರುವ ಆರ್ತವೂ ಆರ್ದ್ರವೂ ಆದ 'ದೇವ ರಕ್ಷಿಸು ನಮ್ಮನನವರತ' ಎಂಬ ವಿನಮ್ರ ಭಾವಾಭಿವ್ಯಕ್ತಿ ತುಂಬ ಸುಂದರವಾಗಿದ್ದು ಗೀತೆಗಳಿಗೆ ಒಂದು ವಿಶಿಷ್ಟ ಲಕ್ಷಣವನ್ನು ಒದಗಿಸಿದೆ.

ತಮ್ಮ ಆರಂಭದ ಬದುಕನ್ನು ಅರಿಷಡ್ವರ್ಗಗಳ ಬಾಧೆಯಿಂದ ಹಾಳುಮಾಡಿಕೊಂಡದ್ದಾಗಿ ಪರಿತಪಿಸುವ ಕನಕರು–ಆಗ ಭಗವಂತ ನನ್ನು ನೆನೆಯದೆ ಜೀವನ ವ್ಯರ್ಥವಾಯಿತು ಎಂದು ಪಶ್ಚಾತ್ತಾಪ ಪಡುತ್ತಾರೆ. ಹೀಗೆ ಪಶ್ಚಾತ್ತಾಪ ಮತ್ತು ನೋವಿನ ಮರುಕಳಿಕೆ

ಅಲ್ಲಲ್ಲೆ ಬಂದು—ಮುಂದೆ ಹೀಗಾಗದೆ ಮನಸ್ಸು ಸದಾ ಹರಿಸ್ಮರಣೆ ಯಲ್ಲಿರಲಿ ಎಂದು ಬಯಸುತ್ತಾರೆ.

ಒಟ್ಟಿನಲ್ಲಿ "ಒಂದು ಸಣ್ಣ ಖಂಡಕಾವ್ಯದಂತಿರುವ 'ಹರಿಭಕ್ತಿ ಸಾರ'ದಲ್ಲಿ ಕನಕದಾಸರ ಆದರ್ಶ ಆಕಾಂಕ್ಷೆಗಳ ಚಿತ್ರಣವಿದೆ. ಹರಿಯ ಮಹಿಮಾದಿಗಳ ನಿರೂಪಣೆಯಿಂದೆ. ತೃಣವಾದರೂ ಪರಮಾತ್ಮನ ಕರುಣಾವಲಂಬನದಿಂದ ಅಮರವಾಗಬಹುದಾದ ಮನುಷ್ಯನ ಬಾಳಿನ ಏಳಿಗೆಯ ಸಿದ್ಧಾಂತವಿದೆ. ತಿಳಿನುಡಿಯಲ್ಲಿ ತಿಳಿವನ್ನು ನೀಡ ಬಲ್ಲ ಈ ಪುಟ್ಟಕೃತಿ ಸರ್ವರಿಗೂ ಒಪ್ಪತಕ್ಕುದಾಗಿದೆ."[1]

## (ಉ) ಕನಕದಾಸರ ಕೀರ್ತನೆಗಳು

ಕನಕದಾಸರು ಕನ್ನಡ ಕೀರ್ತನ ಸಾಹಿತ್ಯದ ಪ್ರಮುಖ ಆಧಾರ ಸ್ಥಂಭ. ಕೀರ್ತನೆಗಳನ್ನು ಬೋಳು ಭಜನೆಗಳನ್ನಾಗಿಸದೆ ಉತ್ತಮ ಕಾವ್ಯಸ್ವರಕ್ಕೆ ಅವುಗಳನ್ನು ಏರಿಸಿದ ಕೀರ್ತಿ ಕನಕದಾಸರಿಗೆ ಸಲ್ಲಬೇಕು. ಕನಕದಾಸರು ಕೀರ್ತನಕಾರರಲ್ಲಿ ಕವಿಗಳೆಂದು ಏಕಮೇವಾದ್ವಿತೀಯ ಪಟ್ಟ ಕಟ್ಟಿಸಿಕೊಂಡವರು. ಶೂದ್ರಸತ್ವ ದಿಂದಲೂ, ಸಹಜ ಜಾನಪದ ದಾಟಿಗಳಿಂದಲೂ ಕೀರ್ತನೆಗಳನ್ನು ಗಟ್ಟಿಗೊಳಿಸಿದವರು. ಭಾರತದ ವಿವಿಧ ತೀರ್ಥಕ್ಷೇತ್ರಗಳನ್ನು ಸುತ್ತಿ ತನ್ಮೂಲಕ ತಮ್ಮ ಅನುಭವಗಳನ್ನು ವಿಸ್ತರಿಸಿಕೊಂಡವರು. ಊರೂರುಗಳಲ್ಲಿ ಮನೆಮನೆಗಳಲ್ಲಿ ತಿರುದುಂಬುವಾಗ ಸಮ ಕಾಲೀನ ಸಮಾಜದ ಜೀವನ ವೈಚಿತ್ರ್ಯಗಳನ್ನು ಪ್ರತ್ಯಕ್ಷವಾಗಿ ಕಂಡವರು. ಶ್ರೀ ಹರಿಯ ಪರಮ ಭಕ್ತರು; ಸಂತ ಶ್ರೇಷ್ಠರು. ಈ ಹಿನ್ನೆಲೆಯಲ್ಲಿ ನೋಡಿದಾಗ ಕನಕದಾಸರ ಕೀರ್ತನೆಗಳಿಗೆ ತಮ್ಮದೇ ಆದ ಹಿರಿಮೆ ಕಂಡುಬರುತ್ತದೆ.

---

1. ವರದರಾಜರಾವ್, ಜಿ., ಹರಿದಾಸ ಹೃದಯ, ೧೯೭೭, ಪು. ೫೫

ಭಗವಂತನನ್ನು ಕೀರ್ತಿಸುವ ಹಾಡುಗಳೇ ಕೀರ್ತನೆಗಳು, ಅವು ಭಗವಂತನ ಕೀರುತಿಯನ್ನು ಕುರಿತಾದುವು. ಕೆಲವು ಸಾರಿ ಅವುಗಳ ವಸ್ತು ಬೇರೆಯಾಗಿದ್ದರೂ ಕೊನೆಯ ಪಕ್ಷ ಭಗವನ್ನಾಮದ ಅಂಕಿತವಾದರೂ ಇದ್ದೇ ಇರುತ್ತದೆ. ಕೀರ್ತನ ಸಾಹಿತ್ಯ ಹೇಳಿ ಕೇಳಿ ಭಜನೆ ಸಾಹಿತ್ಯ. ಅರ್ಥಾತ್ ಭಗವಂತನನ್ನು ಭಜಿಸ ಲೋಸುಗ ರಚನೆಯಾದ ಸಾಹಿತ್ಯ. ಹರಿದಾಸರುಗಳು[1] ಹರಿಸ್ತುತಿಗಾಗಿ ಇವುಗಳನ್ನು ಬಳಸುತ್ತಿದ್ದುದರಿಂದ ಇದಕ್ಕೆ ಹರಿದಾಸ ಸಾಹಿತ್ಯವೆಂದು ಹೆಸರು ಬಂತು. ಈ ಹರಿದಾಸ ಸಾಹಿತ್ಯದ ಸಂಕ್ಷಿಪ್ತ ರೂಪವೇ ದಾಸ ಸಾಹಿತ್ಯ. ಸೌಲಭ್ಯಾಕಾಂಕ್ಷೆಯಿಂದ ಸಂಕ್ಷಿಪ್ತವಾದ ರೂಪ. ಈ ಬಗೆಯ ಭಜನೆಗಳನ್ನು ಬರೆಯುವ ಮತ್ತು ಹಾಡುವ ಶಕ್ತಿಯುಳ್ಳ ಸಂತರ ಕೂಟವನ್ನು ದಾಸಕೂಟ ಎಂದು ಕರೆಯುತ್ತಿದ್ದರು. ವಿಜಯನಗರದ ಶ್ರೀ ಕೃಷ್ಣದೇವ ರಾಯನ ಕಾಲದಲ್ಲಿ ವ್ಯಾಸಗುರುಗಳ ನೇತೃತ್ವದಲ್ಲಿ ಈ ಕೂಟ ಅತ್ಯುಚ್ಛ್ರಾಯ ಸ್ಥಿತಿಯಲ್ಲಿತ್ತು. ವೇದ ಉಪನಿಷತ್ ಭಾಗವತ ಪುರಾಣಾದಿ ಸಂಗತಿಗಳನ್ನು ಇವರು ಸಾರವತ್ತಾಗಿ ಹಾಡು ಕಟ್ಟಿ

---

1. ಹರಿಕಥೆ ದಾಸರುಗಳ ಸಂಕ್ಷಿಪ್ತರೂಪವೇ ಹರಿದಾಸರುಗಳಾಗಿರ ಬೇಕೆಂದು ಕಾಣುತ್ತದೆ. ಹರಿಯ ಅವತಾರಗಳನ್ನು ಗೀತಾತ್ಮಕವಾಗಿ ಬಣ್ಣಿ ಸುತ್ತ ಕಾಲಕಳೆಯುತ್ತಿದ್ದುದು ಇವರ ಪ್ರವೃತ್ತಿ. ಬರುಬರುತ್ತ ಹರಿಕಥೆಗೆ ಗದ್ಯ ಮಾಧ್ಯಮವನ್ನು ಅಳವಡಿಸಿಕೊಂಡಿರಬೇಕು. ಆರಂಭದಲ್ಲಿ ಹರಿಗೆ ಸಂಬಂಧಪಟ್ಟ ಕತೆಗಳನ್ನು ಮಾತ್ರ ಹೇಳುತ್ತಿದ್ದು ತರುವಾಯ ಅದಕ್ಕೆ ವ್ಯಾಪಕತ್ವ ಬಂದು ಬೇರೆ ಬೇರೆ ಕಥೆಗಳನ್ನು ಹೇಳುವುದನ್ನು ರೂಢಿಸಿಕೊಂಡಿರ ಬೇಕು. ಹೀಗಾಗಿ ಈ ಹರಿಕಥೆದಾಸರು ಎಂಬ ಪದ ಅರ್ಥ ವಿಸ್ತಾರವನ್ನು ಪಡೆದುಕೊಂಡಿದೆ. ಗದ್ಯಪದ್ಯಗಳೆರಡನ್ನೂ ಬಳಸಿ, ಮಧ್ಯೆ ಮಧ್ಯೆ ತಾವೂ ಅಭಿನಯಿಸಿ ಯಾವುದೇ ಕತೆಯನ್ನು ರಂಜಕವಾಗಿ ಹೇಳುವವರು ಹರಿಕಥೆ ದಾಸರಾಗುತ್ತಾರೆ.

ಹೇಳುತ್ತಿದ್ದರು; ಗೆಜ್ಜೆ ಕಟ್ಟಿ ಕುಣಿಯುತ್ತಿದ್ದರು. ಹಾಡಿಗೆ ಹಿನ್ನೆಲೆಯಾಗಿ ತಂಬೂರಿಯ ನಾದಶ್ರುತಿ ಇರುತ್ತಿತ್ತು. ಜನಜಾತ್ರೆಯಾಗಿ ಬಂದು ಇದನ್ನು ಆಲಿಸುತ್ತಿದ್ದರು. ಈ ಹರಿಭಜನೆಗಳಲ್ಲಿ ಭಕ್ತಿ ಭಾವಗಳು ತುಂಬಿರುತ್ತಿದ್ದವಲ್ಲದೆ ನೀತಿ ತತ್ತ್ವಗಳೂ ಅಡಗಿರುತ್ತಿದ್ದವು. ಹಸನಾದ ಬದುಕಿನ ಆಶಯು ಅಲ್ಲಿ ಕಂಡುಬರುತ್ತಿತ್ತು. ಮಾನವ ಪ್ರೇಮದ ಹರವು ಅಲ್ಲಿ ಕಾಣಸಿಗುತ್ತಿತ್ತು. ಬಾಳ ವಿನಮ್ರತೆಯ ಪಾಠ ಅಲ್ಲಿ ಲಭ್ಯವಾಗುತ್ತಿತ್ತು.

ಈ ದಾಸವರೇಣ್ಯರ ಭಕ್ತಿ ಶಕ್ತಿಯ ವಶೀಕರಣಕ್ಕೆ ಜನ ಒಳಗಾಗಿ ತಾವೂ ಹರಿಭಕ್ತರಾಗಿ ಹರಿದಾಸರುಗಳ ಅನುಯಾಯಿಗಳಾಗುತ್ತಿದ್ದರು. ಈ ಅನುಯಾಯಿಗಳ ತಂಡ ವೃದ್ಧಿಗೊಂಡು, ಅದಕ್ಕೆ ವ್ಯಾಪಕವಾದ ಪ್ರಚಾರ ಉಂಟಾಗಿ ಕೊನೆಗೆ ಅದು ಒಂದು ಪಂಥದ ಸ್ವರೂಪವನ್ನು ಪಡೆಯಿತು. ಅದೇ ಭಕ್ತಿಪಂಥ. ಶ್ರೀ ಕೃಷ್ಣದೇವರಾಯನ ಕಾಲ ಹೇಳಿ ಕೇಳಿ ಭಕ್ತಿಯುಗ. ವ್ಯಾಸರಾಯರಾದರೊ ಆತನ ಪ್ರಿಯ ಗುರುಗಳು. ಹೀಗಾಗಿ ಈ ಭಕ್ತಿಪಂಥಕ್ಕೆ ರಾಜಮನ್ನಣೆಯೂ ಪ್ರೋತ್ಸಾಹವೂ ದೊರೆತು ಅದು ಹುಚ್ಚು ಹೊಳೆಯಾಗಿ ಹರಿದಿರುವುದರಲ್ಲಿ ಆಶ್ಚರ್ಯವಿಲ್ಲ. ಹರಿದಾಸರುಗಳು ತಮ್ಮ ಭಗವದ್ಭಕ್ತಿಯ ಅಭಿವ್ಯಕ್ತಿಗೂ ಪ್ರಚಾರಕ್ಕೂ ಕೀರ್ತನೆಗಳನ್ನು ಬಳಸಿದರು. ಅವು ಸಾಹಿತ್ಯ ಮತ್ತು ಸಂಗೀತಾಂಶಗಳಿಂದ ಕೂಡಿದ್ದು ಹೆಚ್ಚು ಜನಪ್ರಿಯವಾದುವು. ಕನಕದಾಸರು ಮತ್ತು ಪುರಂದರದಾಸರು ಈ ಕೀರ್ತನ ಪ್ರಕಾರದ ಎರಡು ಧ್ರುವತಾರೆಗಳಾಗಿ ಕಂಗೊಳಿಸಿದರು.

ಕರ್ನಾಟಕದಲ್ಲಿ ಈ ಬಗೆಯ ಭಕ್ತಿಪಂಥ ಹೊಸದೇನೂ ಅಲ್ಲ. ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರರ ನೇತೃತ್ವದಲ್ಲಿ ಭಕ್ತಿ

ಪಂಥವೊಂದು ಆರಂಭವಾಗಿ ಅದು ಮಹಾಂದೋಳನ ರೂಪ ವನ್ನು ಪಡೆಯಿತು. ಭಕ್ತಿಪಂಥ ಕ್ರಾಂತಿ ಪಂಥದ ಸ್ವರೂಪವನ್ನು ಪಡೆದದ್ದು ಅದರ ಹೆಗ್ಗಳಿಕೆ. ಅದು ಭಾಷಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯಕ ಆಂದೋಳನಗಳನ್ನೊಳಗೊಂಡಿದ್ದು ಒಂದು ಮಹತ್ತರ ಸಾಂಸ್ಕೃತಿಕ ವ್ಯವಸ್ಥೆಯಾಗಿ ರೂಪುಗೊಂಡಿತು. ಶಿಷ್ಟಸಾಹಿತ್ಯದಲ್ಲಿ ಮೊದಲಬಾರಿಗೆ ಜನ ಸಾಮಾನ್ಯರ ಆಡು ಭಾಷೆ ಬಳಕೆಗೆ ಬಂದಿತು. ಜನರಲ್ಲಿ ಮೇಲು ಕೀಳು ಎಂಬ ಜಾತಿ ಮತಗಳ ಅಂತರ ಅಳಿದು ಸರ್ವಸಮಾನತೆಯ ಧೋರಣೆ ವ್ಯಕ್ತ ವಾಯಿತು. ಸ್ತ್ರೀಯರಿಗೆ ಸಾಮಾಜಿಕ ವೇದಿಕೆಯನ್ನು ಕಲ್ಪಿಸ ಲಾಯಿತು. ಶಿವನಿಷ್ಠೆಗೆ ಲಿಂಗಧಾರಣೆ ಸಮಾನತೆಯ ಸಂಕೇತ ವಾಯಿತು. ಅನುಭವದ, ಅನುಭಾವದ ಅಭಿವ್ಯಕ್ತಿಯಾಗಿ ವಚನ ಸಾಹಿತ್ಯ ರೂಪುಗೊಂಡಿತು. ಅದು ಶಿವಭಕ್ತಿಯ ತುಂಬು ಪ್ರವಾಹ ವಾಗಿ ಪ್ರವಹಿಸಿತು. ಕಾಯಕವೇ ಕೈಲಾಸ ಎಂಬ ತತ್ವದಲ್ಲಿ ದುಡಿಮೆಗೆ ತುಂಬ ಮಹತ್ವವನ್ನು ಕೊಡಲಾಯಿತು. ಧಾರ್ಮಿಕ ಕಂದಾಚಾರಗಳನ್ನೂ ವೈದಿಕ ಮೂಢನಂಬಿಕೆಗಳನ್ನೂ ಉಗ್ರವಾಗಿ ಖಂಡಿಸಲಾಯಿತು. ಇಲ್ಲಿ ಭಕ್ತಿ ಸ್ಥಾಯಿಯಾಗಿ ಕಂಡುಬಂದರೂ ಸಹ ಬದುಕಿನ ಸಮಗ್ರ ಕ್ರಾಂತಿಗೆ ರಾಷ್ಟ್ರೀಯ ವ್ಯಾಪ್ತಿ ಬಂದುದು ಇದರ ಹೆಗ್ಗಳಿಕೆ.

ಶೈವ ಪಂಥಕ್ಕೂ ದಾಸ ಪಂಥಕ್ಕೂ ಸಾಮ್ಯಗಳಿಗಿಂತ ಅಂತರವೇ ಹೆಚ್ಚು. 'ಭಕ್ತಿ' ಎರಡೂ ಪಂಥಗಳಲ್ಲಿ ಕಂಡು ಬರುವ ಸಮಾನ ಗುಣ; ಸಂಗೀತ ಸಹ. ಒಂದರಲ್ಲಿ ಹರಭಕ್ತಿಯ ಪಾರಮ್ಯ ಇನ್ನೊಂದರಲ್ಲಿ ಹರಿಭಕ್ತಿಯ ಪಾರಮ್ಯ. ಎಲ್ಲ ಹಂತದಲ್ಲೂ ವ್ಯಕ್ತಿತ್ವದ ಗಡಸನ್ನು ಅಳಿಸುವ ಪ್ರಯತ್ನ ದಾಸ ಪಂಥದಲ್ಲಿದೆ. ಸಂಪ್ರದಾಯವನ್ನು ಒಪ್ಪಿಕೊಂಡ ವೈರಾಗ್ಯದ ಅನುಸಂಧಾನಕ್ಕೆ

ದಾಸ ಪಂಥದ ಬಲವಿದೆ. ಆದರೆ ಸಂಸಾರವನ್ನು ಒಂದು ಧರ್ಮ ವಾಗಿ ಗ್ರಹಿಸಿ ಸಂಪ್ರದಾಯವನ್ನು ಬದಿಗೊತ್ತುವ ಧೋರಣೆ ಶೈವ ಪಂಥದ್ದು. ಶಾಂತಿ ದಾಸರುಗಳ ಜೀವನ ಮಂತ್ರಾಕ್ಷತೆ. ಕ್ರಾಂತಿ ಶಿವಶರಣರ ಧ್ಯೇಯ. ದಾಸರು ಭಿಕ್ಷಾಟಣೆಗೆ ಮನ್ನಣೆ ಕೊಟ್ಟರು, ಶರಣರು ಅದು ಸಲ್ಲದೆಂದು ಕಾಯಕಕ್ಕೆ ಮಹತ್ವ ಕೊಟ್ಟರು.

ಎರಡೂ ಪಂಥಗಳು ಸಾಮಾನ್ಯರಿಗೆ ಹತ್ತಿರವಾಗಲು ಕಾರಣ, ಅವರಿಗೆ ಎಟಗುವಂತಹ ಸಾಹಿತ್ಯ ರಚನೆ ಮಾಡಿದ್ದು, ಸಂಗೀತ ಗುಣದಿಂದ ಕೂಡಿದ ಹಾಡುಗಳನ್ನು ರಚಿಸಿದ್ದು. ಹಾಗೆ ನೋಡಿ ದರೆ ಕನ್ನಡ ಸಾಹಿತ್ಯದಲ್ಲಿ ಹಾಡುಗಳ ರಚನೆ ಆದಿಯಿಂದಲೂ ಇದ್ದೇ ಇದೆ. ಕವಿರಾಜಮಾರ್ಗದ 'ಬೆದಂಡೆ' ಕಾವ್ಯಪ್ರಭೇದ–ಹಾಡುಗಳನ್ನು ಉದ್ದೇಶಿಸಿಯೇ ಇರಬೇಕು. ನಿಜಗುಣ ಶಿವಯೋಗಿ ಗಳು ಸಹ ಸಂಗೀತಾಂಶ ಪ್ರಧಾನವಾದ ಭಕ್ತಿಗೀತೆಗಳನ್ನು ಅಪಾರವಾಗಿ ರಚಿಸಿ ಆ ನಿಟ್ಟಿನಲ್ಲಿ ಒಂದು ಹಿರಿದಾದ ಸ್ಥಾನವನ್ನು ಪಡೆದುಕೊಂಡವರು. ಈ ತೆರನ ಭಕ್ತಿಗೀತೆಗಳಿಗೆ ಒಂದು ಹಿರಿಯ ಪರಂಪರೆಯೇ ಇದೆ. ಕ್ರಿ.ಶ. ೬–೭-೮ ನೇ ಶತಮಾನಗಳ ತಮಿಳು ನಾಡಿನ ಶೈವಾಚಾರ್ಯರುಗಳ 'ತೇವಾರಂ' ಎಂಬ ಭಗವತ್ ಕೀರ್ತನೆ ಗಳು ಹನ್ನೆರಡನೆಯ ಶತಮಾನದ ನಮ್ಮ ವಚನಕಾರರ ಮೇಲೆ ಪ್ರಭಾವ ಬೀರಿವೆ ಎನ್ನುವ ಅಭಿಪ್ರಾಯವೂ ಇದೆ.

ಹೀಗೆ ಕೀರ್ತನ ಸಾಹಿತ್ಯದ ಬೇರು ಪರಂಪರೆಯಲ್ಲಿ ತುಂಬಾ ಆಳವಾಗಿದೆ.

ಕನಕದಾಸರು ಕೀರ್ತನ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ತುಂಬಾ ದೊಡ್ಡದು. ಕನಕದಾಸರು ಮತ್ತು ಪುರಂದರದಾಸರು ಈ ಪ್ರಕಾರದ ಪ್ರಾತಿನಿಧಿಕ ವ್ಯಕ್ತಿಗಳು. "ಕನಕದಾಸರ ಕೀರ್ತನೆಗಳ

ಸತ್ವವನ್ನು ಗಮನಿಸಿದರೆ ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದರೆ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈಮಿಗಿಲಾಗಿಯೇ ಇರುವಂತೆ ತೋರುತ್ತದೆ."[1] ಕನಕರ ಕೀರ್ತನೆಗಳನ್ನು ಸ್ಥೂಲವಾಗಿ ಮೂರು ಬಗೆಯಾಗಿ ವಿಂಗಡಿಸಬಹುದು. (೧) ಸಾಮಾಜಿಕ ಕಳಕಳಿಯ ಕೀರ್ತನೆಗಳು. (೨) ಭಕ್ತಿ ಗೀತೆಗಳು (೩) ಆಧ್ಯಾತ್ಮ ಪರ ಕೀರ್ತನೆಗಳು. ಮೇಲುನೋಟಕ್ಕೆ ಈ ವಿಭಜನೆ ಇದ್ದರೂ ಸಹ ಎಲ್ಲ ಕೀರ್ತನೆಗಳಲ್ಲಿ ಭಕ್ತಿ ಸ್ಥಾಯಿಯಾಗಿರುವುದನ್ನು ಗುರುತಿಸಬಹುದು. ಭಕ್ತಿಪರ ಕೀರ್ತನೆಗಳಲ್ಲಿ ಜ್ಞಾನದ ಮಿಂಚನ್ನೂ ಆಧ್ಯಾತ್ಮಿಕ ಕೀರ್ತನೆಗಳಲ್ಲಿ ಸಾಮಾಜಿಕ ಹೊಳಪನ್ನೂ ಕಾಣಬಹುದು. ಒಂದರಲ್ಲಿ ಇನ್ನೊಂದರ ಅಂಶ ಬೆರತುಕೊಂಡಿರುತ್ತವೆ. ಕನಕದಾಸರ ವ್ಯಕ್ತಿತ್ವ ಮತ್ತು ಸಾಧನೆಯ ಮಹತ್ವ ಹೆಚ್ಚಾಗಿ ಗೊತ್ತಾಗುವುದು ಅವರ ಕೀರ್ತನೆಗಳಲ್ಲಿ. ಏಕೆಂದರೆ ಇಲ್ಲಿ ಅವರ ಅಂತರಂಗದ ಪ್ರತ್ಯಕ್ಷ ದರ್ಶನವನ್ನು ಕಾಣುತ್ತೇವೆ. ಬೇರೆ ಸಾಹಿತ್ಯ ಕೃತಿಗಳಲ್ಲಿ ಅವರ ಧೋರಣೆಯನ್ನು ಪಾತ್ರಗಳಲ್ಲಿ ಹುಡುಕಬೇಕಾಗುತ್ತದೆ. ಕೀರ್ತನೆಗಳಲ್ಲಿ ಕನಕರ ಬದುಕಿನ ಹಾಸು ಬೀಸುಗಳನ್ನೂ, ನೋವುನಲಿವುಗಳನ್ನೂ ನೇರವಾಗಿ ಕಾಣಬಹುದು.

ಕನಕದಾಸರು ಕೆಳ ವರ್ಗದಿಂದ ಬಂದವರು. ಜೀವನದಲ್ಲಿ ಸಾಮಾಜಿಕವಾಗಿ ನೊಂದವರು. ಆ ನೋವು ಹೆಚ್ಚಾದಾಗ ಪ್ರತಿಭಟನೆಯ ಕಾವು ಕಾಣಿಸಿಕೊಳ್ಳುವುದು ಸಹಜ :

---

1. ಶಿವರುದ್ರಪ್ಪ, ಜಿ. ಎಸ್., ಪರಿಶೀಲನ, ಪು. ೯೬

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ
ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ

ಎಂಬ ಉಗ್ರ ವಿಡಂಬನೆಯನ್ನು ತನ್ನನ್ನು ಹೀಯಾಳಿಸುತ್ತಿದ್ದವರ ಬಗ್ಗೆ ಮಾಡಿದ್ದುಂಟು. ಕುಲವನ್ನೇ ಮುಂದೆ ಮಾಡಿ. ಮಾತನಾಡುವವರ ಕುಲದ ನೆಲೆಯನ್ನು ಪ್ರಶ್ನಿಸಿದ್ದುಂಟು. ಆತ್ಮ ಯಾವ ಕುಲ? ಜೀವ ಯಾವ ಕುಲ? ಕುಲವ್ಯಾವುದು ಸತ ಸುಖವುಳ್ಳವರಿಗೆ? ಎಂದದ್ದುಂಟು. ಹುಟ್ಟಿನಿಂದ ಯಾರೂ ಶ್ರೇಷ್ಠರಲ್ಲ. ಭಗವಂತನ ಒಲುಮೆಗೆ ಪಾತ್ರರಾದವರು ಮಾತ್ರ ಶ್ರೇಷ್ಠರು ಎಂಬುದು ಅವರ ನಂಬುಗೆ. ಸಮಾಜ ಭ್ರಷ್ಟವಾಗಿರುವುದನ್ನೂ ನ್ಯಾಯನೀತಿಗಳು ದಾರಿತಪ್ಪಿರುವುದನ್ನೂ, ಮೌಲ್ಯಗಳು ಕುಸಿದು ಬೀಳುತ್ತಿರುವುದನ್ನೂ ಆ ಕಾಲಕ್ಕೂ ಅವರು ಗುರುತಿಸಿದರು. "ಸತ್ಯ ಧರ್ಮಗಳೆಲ್ಲ ಎತ್ತ ಪೋದವೊ ಕಾಣೆ ಉತ್ತಮರ ಜೀವನಕೆ ದಾರಿ ಇಲ್ಲ. ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ ಅರ್ಥ ಸಂಪನ್ನರಾಗ್ಯನುಭವಿಸುತಿಹರು", "ಗನ್ನ ಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ" ಎಂದು ಕೊರಗಿದರು. ಇಂತಹ ಕಡೆಗಳಲ್ಲಿ ಸಮಕಾಲೀನ ಜೀವನದ ವಾಸ್ತವಾಂಶಗಳ ನೈಜ ಚಿತ್ರಣಗಳನ್ನು ಕಾಣಬಹುದಾಗಿದೆ. "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ" ಎಂದ ಅವರು, ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ ಬೋಧನೆಯ ಮಾಡುವುದು ಬೇರಾವ ಘನ ಉದ್ದೇಶದ ಪುರುಷಾರ್ಥಕ್ಕೂ ಅಲ್ಲ, ಕೇವಲ ಹೊಟ್ಟೆಗಾಗಿ ಎನ್ನುವ ಹಲವು ನಿದರ್ಶನಗಳಲ್ಲಿ ಸಹ ಕನಕರು ತಮ್ಮ ಸಹಜವಾದ ಆಧ್ಯಾತ್ಮ ಸ್ತರದಿಂದ ದೂರ ನಿಂತು ಬದುಕಿಗೆ ತೀರ ಹತ್ತಿರವಾಗಿ ಆಲೋಚನೆಗಳನ್ನು ವಿಸ್ತರಿಸುವುದನ್ನು ಕಾಣಬಹುದು. "ಕನಕದಾಸರ

ಸಮಾಜ ವಿಮರ್ಶೆಯನ್ನು ಸಮಾಜ ಬೋಧೆಯನ್ನು ಪ್ರತಿನಿಧಿಸುವ ಕೃತಿಗಳೂ ಕೂಡ ಚಿಂತನೆಯ ಹೊಸತನದಿಂದ, ನಿರೂಪಣೆಯ ಸರಳ ಸೊಗಸಿನಿಂದ, ಭಾಷೆಯ ಹದವರಿತ ಬಳಕೆಯಿಂದ ಶೂದ್ರ ಸಹಜವಾದ ನಿರ್ಭೀತ ಎದೆಗಾರಿಕೆಯಿಂದ ಸತ್ಕಾವ್ಯದ, ಪ್ರಭಾವ ಮುದ್ರೆಯನ್ನು ಒತ್ತುವಲ್ಲಿ ಸಾರ್ಥಕಗೊಳ್ಳುತ್ತವೆ."[1]

ಕನಕರ ಕೀರ್ತನೆಗಳಲ್ಲಿ ಭಕ್ತಿಯ ಭಾವ ಸಂಪತ್ತಿ ತುಂಬಿ ತುಳುಕುತ್ತದೆ. ಭಕ್ತ ಶ್ರೇಷ್ಠರಾದ ಅವರು ಭಗವಂತನನ್ನು ಹೃದಯ ತುಂಬಿ ಹಾಡಿರುವುದರಿಂದ ಅವು ನೈಜಕಾಂತಿಯಿಂದ ಕೂಡಿವೆ. ಇವುಗಳಲ್ಲಿ ಹರಿಯ ವಿವಿಧ ಲೀಲಾ ವಿಲಾಸಗಳನ್ನೂ, ಶಕ್ತಿ ಸಾಮರ್ಥ್ಯಗಳನ್ನೂ ಬಹುಮುಖವಾಗಿ ಬಣ್ಣಿಸಲಾಗಿದೆ. ಪ್ರಾರ್ಥನೆಯ ಹಂತದಿಂದ ಹಿಡಿದು ಸಾಕ್ಷಾತ್ಕಾರದ ದರ್ಶನದವರೆಗೆ ಅದರ ವ್ಯಾಪ್ತಿ ಕಂಡುಬರುತ್ತದೆ. ಕನಕರದು ದ್ವೈತ ಸ್ವರೂಪದ ಭಕ್ತಿ. ಜೊತೆಗೆ ಅವರು ಹರಿಯನ್ನು ವಿವಿಧ ಸ್ತರಗಳಲ್ಲಿ ನಿಂತು ನೋಡುತ್ತಾರೆ. ಬಾಲಗೋಪಾಲನನ್ನು ಕೀರ್ತಿಸುವಾಗ ಕವಿ ತಾಯಿಯ ಸ್ಥಾನದಲ್ಲಿರುತ್ತಾರೆ. ಹೀಗಾಗಿ ಅಂತಹ ಕೀರ್ತನೆಗಳಲ್ಲಿ ವಾತ್ಸಲ್ಯಭಾವ ತುಂಬಿತುಳುಕುತ್ತದೆ; ಮಮತೆ ಮೈದುಂಬಿರುತ್ತದೆ. ಹರಿಯ ದಶಾವತಾರಗಳ ಚಿತ್ರಗಳು ಅವರ ಕೀರ್ತನೆಗಳಲ್ಲಿ ಕಂಡುಬರುತ್ತವೆ.

ದೇವಿ ನಮ್ಮ ದ್ಯಾವರು ಬಂದರು
ಬನ್ನಿರೆ ನೋಡ ಬನ್ನಿರೇ ॥ಪ॥
..................................
ದೊಡ್ಡ ಮಡುವಿನೊಳಗೆ ನಮರಂಗ

---

1. ಲಕ್ಕಪ್ಪಗೌಡ, ಎಚ್. ಜೆ., ಕನಕದಾಸರ ಕೀರ್ತನೆಗಳ ಕಾವ್ಯಮೌಲ್ಯ, ಕನಕಕಿರಣ. ಕಾ. ತ. ಚಿಕ್ಕಣ್ಣ (ಸಂ). ಪು. ೧೬೪

ಗುಡ್ಡವ ಹೊತ್ತು ಕೊಂಡು ನಿಂತಾನ್ಯ
ಗುಡ್ಡವ ಹೊತ್ತು ಕೊಂಡು ನಿಂತು ಸುರರನು
ದೊಡ್ಡವರನ್ನು ಮಾಡ್ಯಾನ
ಹುಡುಗ ಹಾರುವನಾಗಿ ನಮರಂಗ
ಬೆಡಗೀಲಿ ಮುಗಿಲೀಗಿ ಬೆಳೆದು ಬಲಿಯನ್ನೆ
ಅಡಿಯಿಂದ ಪಾತಾಳಕ್ಕೊತ್ಯಾನ

ಇಂತಹ ಭಾಗವತ ಚಿತ್ರಗಳಲ್ಲಿ ಸಹ ಕನಕದಾಸರ ಮೇಲೆ ಜಾನಪದ ಭಾಷೆ ಮತ್ತು ಸಾಹಿತ್ಯದ ಪ್ರಭಾವವನ್ನು ಗುರುತಿಸಬಹುದಾಗಿದೆ. ವಾಸ್ತವವಾಗಿ ಮೇಲಿನ ಕೀರ್ತನೆ ಎರಡು ಜನಪದ ತ್ರಿಪದಿಗಳ ಜೋಡಣೆಯಾಗಿದೆ ಅಥವಾ ಆ ಬಗೆಯ ತ್ರಿಪದಿಗಳ ಅನುಕರಣೆಯಾಗಿದೆ.[1]

ಅಲ್ಲದೆ ನಾಟಕದ ಮಟ್ಟುಗಳ-ಯಕ್ಷಗಾನದ ಹಾಡುಗಳ ಹೋಲಿಕೆ ಇರುವ ಕೀರ್ತನೆಗಳೂ ಕಂಡುಬಂದಿವೆ :

ಕಂಡೆನಾ ತಂಡ ತಂಡದ ಹಿಂಡು ಹಿಂಡು ದೈವ ಪ್ರ
ಚಂಡರಿಪು ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ ॥ಪ॥

ಈ ಕೀರ್ತನೆ ನಾಟಕದ ಮಟ್ಟುಗಳ ಅನುಕರಣೆಗೆ ನಿದರ್ಶನವಾಗಿದೆ. ಆದರೆ ಆ ಕಾಲದಲ್ಲಿ ಕನ್ನಡ ನಾಟಕಗಳು ಇದ್ದವೇ ? ಶ್ರೀ ಕೃಷ್ಣ ದೇವರಾಯನ ರಾಜಾಶ್ರಯದಲ್ಲಿ ಏನಾದರೂ ನಾಟಕಗಳ ಕಲೆಗೆ ಪ್ರೋತ್ಸಾಹವಿತ್ತೆ ಎಂಬುದು ತಿಳಿಯಬೇಕಾಗಿದೆ.

ಕನಕದಾಸರ ಕೀರ್ತನೆಗಳನ್ನು ಆದ್ಯಂತವಾಗಿ ಅಧ್ಯಯನ ಮಾಡಿದಾಗ ಅವರಿಗೆ ದೈವ ಸಾಕ್ಷಾತ್ಕಾರ ಅಷ್ಟು ಸುಲಭವಾಗಿ ಆಗಿರುವಂತೆ ಕಂಡುಬರುವುದಿಲ್ಲ. ಸಾಧನೆಯ ಹಂತದಲ್ಲಿ ಅವರು ಬದುಕನ್ನು ತುಂಬಾ ಸವೆಸಿದ್ದಾರೆ. ಹರಿಯನ್ನು ನಿರಂತರ ಪೂಜಿಸಿ ಫಲವಿಲ್ಲದೆ ಬೇಸತ್ತು ಸಿಟ್ಟಿನಿಂದ :

---

1. ಈ ಕೀರ್ತನೆ ಸಂಶೋಧನೆಗೆ ಒಂದು ಒಳ್ಳೆಯ ಮೂಲವಾಗಬಲ್ಲುದು.

ಆರು ಬದುಕಿದರಯ್ಯ ಹರಿ ನಿನ್ನ ನಂಬಿ,
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ

ಎಂದು ನುಡಿದಿದ್ದಾರೆ. "ನಿನ್ನನ್ನು ನಂಬಿ ತಿರಿವೆನೆಂದರೆ ತಿರುಪೆಯು ಕೂಳೂ ಹುಟ್ಟದು" ಎನ್ನುವಷ್ಟರ ಮಟ್ಟಿಗೆ ನಿರಾಸೆಗೊಂಡಿದ್ದಾರೆ. ಆದರೆ ಅದೆಲ್ಲಾ ಸಾಧನೆಯ ಹಾದಿಯಲ್ಲಿ ಭಕ್ತನ ಪಾಡುಗಳು. ಆದರೆ ಭಗವಂತನ ದರ್ಶನ ಲಭ್ಯವಾದಾಗ ಹಿಂದಿನ ನೋವೆಲ್ಲ ಮಾಯವಾಗಿ :

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು

ಎಂದು ಆನಂದದಿಂದ ಹಾಡಿದ್ದಾರೆ. ಹೀಗಾಗಿ ಕನಕರ ಕೀರ್ತನೆಗಳಲ್ಲಿ ಅವರ ವ್ಯಕ್ತಿತ್ವದ ವಿಕಾಸವೂ ಹರಡಿಕೊಂಡಿದೆ.

ಕನಕದಾಸರ ಆಧ್ಯಾತ್ಮಿಕ ವಲಯಕ್ಕೆ ಸೇರಿದ ಕೀರ್ತನೆಗಳು ಅವರ ಕೀರ್ತನೆಗಳಲ್ಲಿ ಹೆಚ್ಚು ಶ್ರೇಷ್ಠವಾದುವುಗಳು ಎಂದು ನನ್ನ ಭಾವನೆ. ಏಕೆಂದರೆ ಇಲ್ಲಿ "ಕೇವಲ ಭಾವುಕವಲ್ಲದ ಭಕ್ತಿಮಾರ್ಗದಲ್ಲಿ, ಶುಷ್ಕ ಜಡವಲ್ಲದ ಜ್ಞಾನ ಮಾರ್ಗದಲ್ಲಿ ಮುನ್ನಡೆದ ಹಿರಿಮೆಯೂ ಇವರದಾಗಿದೆ. ಇವರ ಹಾಡುಗಳಲ್ಲಿ ಭಕ್ತಿಯ ಆವೇಶವನ್ನಷ್ಟೇ ಕಾಣುವುದಿಲ್ಲ. ವಿಚಾರದ ಹೊಳಪನ್ನೂ ಕಾಣುತ್ತೇವೆ. ಆಚಾರ ವಿಚಾರಗಳ ಸಮನ್ವಯದಿಂದ ಗಟ್ಟಿಗೊಂಡ ಅನುಭಾವದ ಹರಳುಗಳೂ ಅಲ್ಲಲ್ಲಿ ಹೊಳೆಯುತ್ತವೆ."[1] ಜ್ಞಾನ ಮತ್ತು ಅಧ್ಯಾತ್ಮ ಮಿಳಿತವಾದ ವಿಚಾರಗಳನ್ನು ದಿನನಿತ್ಯದ ಕೌಟುಂಬಿಕ ಚಿತ್ರಗಳ ಮೂಲಕ ನೀಡುವ ರೀತಿ ಕನಕರಿಗೆ ಕರಗತವಾಗಿದೆ. ಈ ಕೆಳಗಿನ ಕೀರ್ತನೆ ಅಂತಹುದೊಂದು ನಿದರ್ಶನ :

---

1. ತಿಪ್ಪೇರುದ್ರಸ್ವಾಮಿ, ಎಚ್., ಕನಕದಾಸರ ಅನುಭಾವ ಗೀತೆಗಳು, ಕನಕ ಕಿರಣ, ಕಾ. ತ. ಚಿಕ್ಕಣ್ಣ (ಸಂ), ಪು. ೧೮೧

ಅಡುಗೆಯನ್ನು ಮಾಡಬೇಕಣ್ಣ । ನಾನೀಗ ಜ್ಞಾನ-
ದಡುಗೆಯನ್ನು ಮಾಡಬೇಕಣ್ಣ ॥ಪ॥
ಅಡುಗೆಯನ್ನು ಮಾಡಬೇಕು । ಮದಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ ಸಡಗರದಿ ಈ ಮನೆಯ
ಸಾರಿಸಿ ॥ಅ. ಪ॥

ಕನಕದಾಸರು ತಮ್ಮ ಕೀರ್ತನೆಗಳ ಮೂಲಕ ಬಾಳಿನಲ್ಲಿ ಆಶಾವಾದ
ವನ್ನು ಬಿತ್ತಿದರು.

ತಲ್ಲಣಿಸದಿರು ಕಂಡ್ಯ ತಾಳು ಮನವೇ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

ಎಂದು ಭಗವಂತನಲ್ಲಿ ಭರವಸೆಯನ್ನು ಸಾರಿದರು. 'ಹುಟ್ಟಿಸಿದ
ದೇವ ಹುಲ್ಲು ಮೇಯಿಸುವುದಿಲ್ಲ' ಎಂದು ನಂಬಿದರು.

"ಅವರ ಹಲವಾರು ಕೀರ್ತನೆಗಳಲ್ಲಿ ಸಮಾಜ ವಿಮರ್ಶೆ ಮತ್ತು
ಜನಜೀವನ ಚಿತ್ರವು ಸಾಕಷ್ಟು ಖಂಡಿತವಾದ ಲೀಲೆಯಲ್ಲಿ ಬಂದಿರ
ತ್ತದೆ. ಅಂದಿನ ಸಮಾಜದಲ್ಲಿಯ ಡಂಭಾಚಾರ, ಅನ್ಯಾಯ-ಅಸತ
ಮುಂತಾದುವನ್ನು ಅವರು ಕೆಡೆನುಡಿದಿದ್ದಾರೆ. ಇತರ ದಾಸರಿಗಿಂತ
ಅವರ ವಿಮರ್ಶೆ ವಿಡಂಬನೆಗಳು ಒಂದು ತೂಕ ಹೆಚ್ಚೆಂದು ಹೇ
ಬಹುದು."[1] ಉಪಮೆ, ರೂಪಕ, ಅಲಂಕಾರ, ಸೂಕ್ತಿ, ಗಾ
ಮತ್ತು ಚಿತ್ರ ಕವಿತ್ವಗಳಿಂದ ಅವರ ಕೀರ್ತನೆಗಳು ಶಕ್ತಿಗೊಂಡಿವ

## (ಊ) ಮುಂಡಿಗೆಗಳು

ಕನಕದಾಸರ ಸಾಹಿತ್ಯ ಹಲವು ಬಗೆಯಲ್ಲಿ ವೈವಿಧ್ಯಪೂರ್ಣ
ವಾದುದು. ಅಂತಹ ವೈವಿಧ್ಯತೆಗಳಲ್ಲಿ ಅವರ ಮುಂಡಿಗೆಗಳು
ಸೇರುತ್ತವೆ. ಮುಂಡಿಗೆ ಒಂದು ರೀತಿಯಲ್ಲಿ ಚಮತ್ಕಾರಯುಕ

---

1. ಮುಗಳಿ, ರಂ.ಶ್ರೀ., ಕೀರ್ತನೆಗಳ ಕನಕದಾಸರು, ಕನಕದಾಸ ಪ್ರಶ
ಗ್ರಂಥ. ಪು. ೨

ಕವಿತೆಗಳು. 'ಕನಕನನ್ನು ಕೆಣಕಬೇಡ ಕೆಣಕಿ ತಿಣಕಬೇಡ' ಎಂಬ ಗಾದೆಯಂತಹ ಮಾತೊಂದುಂಟು. ಬಹುಶಃ ಅದು ಕನಕದಾಸರ ಮುಂಡಿಗೆಗಳನ್ನು ಕಂಡೇ ಹುಟ್ಟಿರಬೇಕು. ಮರದ ದಿಮ್ಮಿಗಳನ್ನೂ, ತೊಲೆಗಳನ್ನೂ ಮುಂಡಿಗೆಗಳೆಂದು ಕರೆಯುವುದುಂಟು; ಸಮಸ್ಯೆಗಳನ್ನೂ ಒಗಟುಗಳನ್ನೂ ಮುಂಡಿಗೆ ಎನ್ನುವುದು ಇತ್ತೀಚೆಗೆ ರೂಢಿಗೆ ಬಂತು. ಸಾಹಿತ್ಯದಲ್ಲಿ ಕಗ್ಗಂಟ್ಟಿನಂತೆ ಸಿಕ್ಕಿನಿಂದ ಕೂಡಿದ, ಸುಲಭವಾಗಿ ಬಿಡಿಸಲಾಗದ ಸಮಸ್ಯೆಗಳಿಗೆ ಮುಂಡಿಗೆಗಳೆಂದು ಕರೆಯಲಾಯಿತೆಂದು ತೋರುತ್ತದೆ. ಈ ಮುಂಡಿಗೆಗಳಿಗೆ ಒಂದು ಪರಂಪರೆಯೇ ಇರುವಂತಿದೆ. ಅಭಿನವ ಪಂಪನಲ್ಲಿ, ಪ್ರಭುದೇವರಲ್ಲಿ, ಇತರ ಕೆಲವು ವಚನಕಾರರಲ್ಲಿ, ಕುಮಾರವ್ಯಾಸನಲ್ಲಿ ಮುಂಡಿಗೆಗಳು ಹೆಸರುವಾಸಿಯಾಗಿವೆ.

ಪಾಂಡಿತ್ಯಕ್ಕಾಗಿ, ಪಂಡಿತರನ್ನು ಒರೆಹಚ್ಚುವುದಕ್ಕಾಗಿ, ಚಮತ್ಕಾರಕ್ಕಾಗಿ, ಸ್ವಾರಸ್ಯಕ್ಕಾಗಿ, ವಿಚಾರದ ಜಿಜ್ಞಾಸೆಗಾಗಿ, ವಿಷಯದ ಗೋಪ್ಯತೆಗಾಗಿ, ತತ್ವಜ್ಞಾನ ಮತ್ತು ಅನುಭವಗಳ ಶಕ್ತಿವತ್ತಾದ ನಿರೂಪಣೆಗಾಗಿ—ಹೀಗೆ ವಿವಿಧೋದ್ದೇಶಗಳಿಂದ ಈ ಮುಂಡಿಗೆಗಳು ರಚನೆಯಾಗಿರುತ್ತವೆ.[1] ಕನಕರ ಒಗಟಿನ ರೂಪದ ಅಥವಾ ಬೆಡಗಿನ ಅರ್ಥದ ಹಾಡುಗಳನ್ನು ಕನಕರ ಮುಂಡಿಗೆಗಳು ಎಂದು ಗುರುತಿಸಲಾಗಿದೆ. ಪುರಾಣ ಸಂಗತಿಗಳು, ಧಾರ್ಮಿಕ ವಿಚಾರಗಳು, ಸಾಧಕರಿಗೆ ಬೇಕಾದ ಮಾರ್ಗದರ್ಶಕ ಸೂತ್ರಗಳು ಇಂತಹ ಮುಂಡಿಗೆಗಳಲ್ಲಿ ವ್ಯಕ್ತವಾಗಿವೆ. ಕನಕದಾಸರ ಒಂದು ಪ್ರಸಿದ್ಧ ಮುಂಡಿಗೆ ಹೀಗಿದೆ :

---

1. ಈ ಬಗ್ಗೆ ಹೆಚ್ಚು ತಿಳಿಯಲು ನೋಡಿ: ಬಿಂದು ಮಾಧವರಾವ್ ಬುರ್ಲಿ, ಕನಕದಾಸರ ಮುಂಡಿಗೆಗಳು, ಮಹಾತ್ಮ ಕನಕದಾಸ ಪ್ರಶಸ್ತಿ, ಪು. ೪೭–೫೭

ಅಂಧಕ[1] ನನುಜನ[2] ಕಂದನ[3] ತಂದೆಯು[4]
ಕೊಂದನ[5] ಶಿರದಲಿ ನಿಂದವನ[6]
ಚಂದದಿ ವಡೆದನ[7] ನಂದನೆಯುಳ[8]ನಲ
ವಿಂದಧರಿಸಿದ[9] ಮುಕುಂದನಿಗೆ

ವಿಷ್ಣುವಿಗೆ ಅನ್ವಯವಾಗುವ ಈ ಮುಂಡಿಗೆಯನ್ನು ಬುರ್ಲಿ ಬಿಂದು ಮಾಧವರಾಯರು ಹೀಗೆ ಅರ್ಥೈಸಿದ್ದಾರೆ :

1. ಧೃತರಾಷ್ಟ್ರ 2. ಪಾಂಡುರಾಜ 3. ಧರ್ಮರಾಯ 4. ಯಮ 5. ಈಶ್ವರ 6. ಚಂದ್ರ 7. ಸಮುದ್ರರಾಜ 8. ಲಕ್ಷ್ಮಿ 9. ವಿಷ್ಣು.

ಇದು ಒಂದು ಚಿಂತನೆಗೆ ದೊರೆತ ಫಲ. ಆದರೆ ಇದೇ ಸರಿಯಾದ ಅರ್ಥ ಎಂದು ಹೇಳಲು ಸಾಧ್ಯವಿಲ್ಲ. ಮುಂಡಿಗೆಗೆ ದೊರೆತ ಒಂದೊಂದು ವ್ಯಾಖ್ಯಾನವೂ ಅದರ ಒಂದೊಂದು ಮುಖದರ್ಶನ ಎಂದಷ್ಟೇ ಹೇಳಬಹುದು. ಆದರ ಕರ್ತೃ ಕಂಡ ಅರ್ಥ ಏನಿತ್ತೆಂದು ತಿಳಿಯುವುದು ಕಷ್ಟ. ವಾಸ್ತವವಾಗಿ ಮುಂಡಿಗೆಗಳು ಜ್ಞಾನದ ಸವಾಲುಗಳು. ಕೆಲವು ಮುಂಡಿಗೆಗಳನ್ನು ಅರ್ಥೈಸಲು ಗಣಿತ ಜ್ಞಾನದ ಆವಶ್ಯಕತೆಯೂ ಬೇಕಾಗುತ್ತದೆ. ಕನಕರ ಮುಂಡಿಗೆಗಳಲ್ಲಿ ಸೊಗಸಾದ ರೂಪಕ ಶಕ್ತಿಯನ್ನೂ, ಉಪಮಾ ಸೌಂದರ್ಯಗಳನ್ನೂ ಕಾಣಬಹುದು.

ಒರಿದು ಮಾಡುವ ಪಾಪ ನುಗ್ಗೆಕಾಯಿ
ಹರಿ ನಿನ್ನ ಧ್ಯಾನ ಬಾಳೆಕಾಯಿ
ಕರಿರಾಜಗೊಲಿದಂಥ ಬದನೆಕಾಯಿ
ಅರಿಷಡ್ವರ್ಗದಿ ಒದಗಿಲಿಕಾಯಿ

ಇಲ್ಲಿ ಅರ್ಥಾನುಸಾರಿಯಾಗಿ ಯತಿ ವಿರಾಮಗಳನ್ನು ತರಬಹುದು. ಪ್ರಾಸಾನುಪ್ರಾಸಗಳುಂಟು. ಮೇಲಿನ ಮುಂಡಿಗೆಯಲ್ಲಿ ವೈವಿಧ್ಯ

ಮಯವಾದ ತರಕಾರಿಯು ಉಪಮಾನಗಳಿವೆ. ಒಡಪು ಅಥವಾ ಒಗಟುಗಳಿಗಿರುವಂತೆಯೇ ಮುಂಡಿಗೆಗಳಲ್ಲೂ ಹಾಸ್ಯದ ಲಕ್ಷಣ ವಿರುತ್ತದೆ. ಇವುಗಳು ಚತುರೋಕ್ತಿಗಳೂ, ಜಾಣ್ನುಡಿಗಳೂ ಆಗಿರುತ್ತವೆ. ಪ್ರಶ್ನೆಗಳ ರೂಪದಲ್ಲಿಯೂ ಇರುತ್ತವೆ. ಒಳಗಡೆ ಗೂಢಾರ್ಥಗಳನ್ನು ಹೊಂದಿದ್ದು ಕುತೂಹಲವನ್ನು ಕೆರಳಿಸುತ್ತವೆ:

ಮುತ್ತುಗಳಾ ಹಣ್ಣು ಕಾಯಾದಬಳಿಕಿನ್ನು
ಮತ್ತೊಂದು ಚೋದ್ಯ ಕೇಳಿ
ಚಿತ್ರದ ಹೂವಿನ ಹವಳ ಕಾಯಾಗುವ
ಅರ್ಥವು ತಿಳಿದು ಪೇಳಿ ?

ಇದರ ಅರ್ಥವನ್ನು ಹೀಗೆ ಗ್ರಹಿಸಲಾಗಿದೆ:

"೧. ಮುತ್ತುಗಳು = ಮುಕ್ತರು. ಜೀವವು ಪರಿಪಕ್ವವಾಗಿ ಮುಕ್ತ ವಾದ ಬಳಿಕ ಮತ್ತೆ ಕಾಯವನ್ನು (ದೇಹ) ಹೊಂದಿದಾಗ ಅದರ ಮಹತ್ವವನ್ನು ಕೇಳಿರಿ"—ಪುಷ್ಪ = ಐಹಿಕ ಫಲ. ಕಾಯಿ = ಮೋಕ್ಷ ಫಲ (ಇವು ವೈದಿಕ ಶಬ್ದಗಳಲ್ಲಿ ಉಪಯೋಗಿಸುವ ಅರ್ಥ). ಸಾಧಕನಾದ ಜೀವನಿಗೆ ಚಿತ್ರದ ಪ್ರತೀಕವೇ ಧ್ಯಾನಾದಿ ಸಾಧನ ಗಳಿಂದ ಫಲಪುಷ್ಪ ಕೊಡುವಾಗ ಮುಕ್ತನಾಗಿ (ಸಕಲ ಸಂಸಾರ ಬಂಧನಗಳಿಂದ ಮುಕ್ತನಾದ) ಸಾಕ್ಷಾತ್ ಪರಮಾತ್ಮನನ್ನೇ ಧ್ಯಾನಿಸುವ ದೇಹಧಾರಿಯಾದವನ ಕೇಳುವುದೇನು ? ಅರ್ಥಾತ್ ಆ ಮುಕ್ತನು ಅತಿಶಯಾನಂದದಿಂದ ಕುಣಿದಾಡುವನು ಎಂದರ್ಥ" (—ಬುರ್ಲಿ ಬಿಂದು ಮಾಧವರಾವ್, ಪು. ೫೬). ಹೀಗೆ ತತ್ವ ಜ್ಞಾನಕ್ಕೂ, ಆತ್ಮಜ್ಞಾನಕ್ಕೂ ಕೈಚಾಚುವ ಮುಂಡಿಗೆಗಳು ಹೆಚ್ಚಾ ಗಿವೆ. ಕನಕದಾಸರು ಹೆಚ್ಚು ಮುಂಡಿಗೆಗಳನ್ನು ಬರೆದಿದ್ದಾರೆ ಎಂದು ಹೇಳಲಾದರೂ ಸಹ ಈವರೆಗೆ ದೊರೆತಿರುವ ಮುಂಡಿಗೆಗಳು ಇಪ್ಪತ್ತೈದು ಮಾತ್ರ. ಕೆಲವು ಮುಂಡಿಗೆಗಳ ಮೇಲೆ ಜನಪದ

ಒಗಟುಗಳ ಪ್ರಭಾವವಿದೆ. ಇನ್ನು ಕೆಲವು, ವಚನಕಾರರ ಮುಂಡಿಗೆಗಳಿಂದ ಪ್ರಭಾವಿತವಾಗಿರುವಂತೆ ಕಂಡುಬರುತ್ತದೆ. ಸಾಹಿತ್ಯದ ಒಡಪುಗಳನ್ನು ಬಿಡಿಸಲು ಸಮರ್ಥರಾದವರು ಜೀವನದ ಒಡಪನ್ನೂ ಬಿಡಿಸಬಲ್ಲರು ಎಂಬುದು ಒಂದು ಹೇಳಿಕೆ. ಕನಕರು ಅದಕ್ಕೆ ಅರ್ಹರು. ಏಕೆಂದರೆ ಅವರ ಮುಂಡಿಗೆಗಳು ಬಾಳಿನ ಅರ್ಥವನ್ನು ಆಧರಿಸಿಯೇ ರಚನೆಯಾಗಿವೆಯೇ ಹೊರತು ಬರಿಯ ಕಾಲ್ಪನಿಕ ಚಿತ್ರಗಳಾಗಿಲ್ಲ.

## ೫. ಕನಕದಾಸರ ಶೈಲಿ

ಕನಕದಾಸರು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೆಲಸ ಮಾಡಿದ್ದಾರೆ. ಸಾಂಗತ್ಯ, ಷಟ್ಪದಿ, ಕೀರ್ತನೆ ಮುಂತಾದ ಛಂದೋ ಮಾಧ್ಯಮಗಳಲ್ಲಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ವಸ್ತುವಿಗನುಗುಣವಾದ ಭಾಷೆಯ ಬಂಧವನ್ನು ಸೂಕ್ತವಾಗಿ ಅಳವಡಿಸಿದ್ದಾರೆ.

ಸರಳತೆಯಲ್ಲಿ ಸೌಂದರ್ಯ ತುಂಬುವುದು ಕನಕದಾಸರ ಶೈಲಿಯಲ್ಲಿ ಕಂಡುಬರುವ ವಿಶಿಷ್ಟತೆ ಎಂದು ಹೇಳಬಹುದು. ತುಂಬ ಗಹನವಾದ ತತ್ತ್ವಜ್ಞಾನವನ್ನೂ, ಆಧ್ಯಾತ್ಮ ವಿಚಾರಗಳನ್ನೂ ಲಲಿತವಾದ ಬರವಣಿಗೆಯಲ್ಲಿ ಸಾಮಾನ್ಯರಿಗೂ ಅರ್ಥವಾಗುವ ಹಾಗೆ ಹೃದ್ಯವಾಗಿ ಹೇಳುವುದು ಅವರಿಗಿರುವ ಕಲೆಗಾರಿಕೆ. ಅವರ ಕವಿತ್ವದಲ್ಲಿ ಒಂದು ನವ್ರತೆ ಮತ್ತು ಆತ್ಮೀಯತೆ ಕಂಡುಬರುತ್ತದೆ. ಅದು ಶೃಂಗಾರವಾಗಲಿ, ಹಾಸ್ಯವಾಗಲಿ ಅಥವಾ ಕರುಣಾರಸವಾಗಲಿ ಅಲ್ಲೊಂದು ಅಕ್ಕರೆಯ ದನಿಯನ್ನು ಅಡಗಿಸುವುದು ಕನಕದಾಸರ ಸ್ವಭಾವ. "ರಸಪೂರಿತ ಸುಪ್ರಬಂಧ ವಿಲಕ್ಷಣವೆಸೆವಂತೆ" ಹೇಳುವ ಸಹಜ ಶಕ್ತಿ ಅವರಿಗಿದೆ. 'ಸಕ್ಕದ ಕನ್ನಡವೆರೆಸಿದ ಕವಿತೆಯ ಚೆಲುವು' ಅವರದು.

"ಇನಿವಾತುಗಳ ಸತ್ವದ ವ್ಯಂಗ್ಯೋಕ್ತಿ
ಧ್ವನಿಯರ್ಥ ಗೌರವದಿಂದೆ ।
ತನಿರಸವಡೆದ ಮತ್ಕೃತಿ"

ರಚಿಸಿದ ಹೆಗ್ಗಳಿಕೆ ಅವರಿಗುಂಟು. ಉಪಮೆ, ರೂಪಕ, ಅಲಂಕಾರ ಗಳನ್ನು ಅವರು ಅಯತ್ನ ಪೂರ್ವಕವಾಗಿ ತರಬಲ್ಲರು.

'ತೋರಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು' 'ಕಾಲಪಾವನ ಕೀಳು ಮಾಡದು', 'ಎಂಜಲೆಂಜಲು ಎಂಬರಾನುಡಿ ಎಂಜಲಲ್ಲವೆ, ಹಾಲು ಕರುವಿನ ಎಂಜಲಲ್ಲವೆ', 'ನೀ ಮಾಯೆ ಯೊಳಗೊ ನಿನ್ನೊಳು ಮಾಯೆಯೊ ?' 'ಆರಿಗಾರಿಲ್ಲ ಆಪತ್ಕಾಲ ದೊಳಗೆ', 'ಭಕ್ತರಿಗುಂಟೆ ಭಯ ?' ಮುಂತಾದ ಮಾತುಗಳು ಉಪಮೆಗಳಾಗಿ, ಸೂಕ್ತಿಗಳಾಗಿ, ಸುಭಾಷಿತಗಳಾಗಿ ರೂಪುಗೊಂಡಿರು ವುದನ್ನು ಕಾಣಬಹುದು. ಕನಕದಾಸರು ಜಾನಪದರ ಬದುಕಿಗೆ ಹತ್ತಿರವಾಗಿದ್ದವರು. ಅಲ್ಲಿನ ಆಡುನುಡಿಗಳು, ಗಾದೆ ಮಾತುಗಳು, ಸಾಮತಿಗಳು ಕನಕ ಸಾಹಿತ್ಯವನ್ನು ಪುಷ್ಟಿಗೊಳಿಸಿವೆ :

ಕಂತೆಗೆ ತಕ್ಕ ಬೊಂತೆ, ಮಂಜು ಸರಿಯಲಿ ಕೆರೆ ತುಂಬುವುದೆ, ಮುಂಗೈ ಕಂಕಣಕೆ ಕನ್ನಡಿಯೇಕೆ, ಎಲ್ಲಾರು ಮಾಡುವುದು ಹೊಟ್ಟೆ ಗಾಗಿ ಗೇಣು ಬಟ್ಟೆಗಾಗಿ, ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ— ಮುಂತಾದ ಮಾತುಗಳು ಇದನ್ನು ಸಮರ್ಥಿಸುತ್ತವೆ.

ಕರಗಸವೆತ್ತ ಕಂದಳಿಯೆತ್ತ ಸಂ
ಹರವೆತ್ತ ಕಂದರ್ಪನೆತ್ತ

ಮುಂತಾದ ವಡಿಗಳಿಗೂ ಅವರ ಸಾಹಿತ್ಯದಲ್ಲಿ (ಮೋಹನ ತರಂಗಿಣಿ) ಅವಕಾಶವುಂಟು. ಪ್ರಾಸಾನುಪ್ರಾಸಗಳನ್ನು ಅರ್ಥವತ್ತಾಗಿ ತರುವುದರಲ್ಲಿ ಅವರು ಸಿದ್ಧ ಹಸ್ತರು. ನೇರವಾದ ಕಥನ ಕಲೆಗೆ ಭಾಮಿನಿಯನ್ನು ಅತ್ಯಂತ ಸಮರ್ಥವಾಗಿ ಬಳಸಿದ ಕೀರ್ತಿ ಅವ

ರಿಗೆ ಸಲ್ಲುವಂತಹುದು. ನಳಚರಿತ್ರೆ ಇದಕ್ಕೆ ಒಂದು ಉತ್ತಮ ಉದಾಹರಣೆ.

ಒಂದೇ ವಾಕ್ಯಕ್ಕೆ ಪುಟಗಟ್ಟಲೆ ಅರ್ಥ ತುಂಬುವ ಶಕ್ತಿ ಅವರದು. "ನಾನು ಹೋದರೆ ಹೋದೇನು" ಎಂಬ ಮಾತು ಇದಕ್ಕೆ ಒಳ್ಳೆಯ ನಿದರ್ಶನ. ಇದು ಒಂದು ಘಟನೆಯನ್ನೇ ತನ್ನಲ್ಲಿ ತುಂಬಿಕೊಂಡಿದೆ.

ಅಡಿಗೆಯನ್ನು ಮಾಡಬೇಕಣ್ಣ ನಾನೀಗ ಜ್ಞಾನ
ದಡಿಗೆಯನ್ನು ಮಾಡಬೇಕಣ್ಣ

ಎಂಬಂತೆ ಘನೀಕರಿಸಿ ಸಾಂದ್ರ ಬಂಧುರವಾಗಿ ಹೇಳುವುದು ಕನಕರ ಜಾಯಮಾನ. ಕನಕರ ಕೀರ್ತನೆಗಳ ಅನೇಕ ಸಾಲುಗಳು ನೀತಿಯ ನುಡಿಗಟ್ಟುಗಳಾಗಿವೆ:

'ಹಸಿದು ಬಂದವರಿಗೆ ಅಶನವೀಯಲು ಬೇಕು, ಸಿರಿಬಂದ ಕಾಲಕ್ಕೆ ಮರೆಯಬೇಡ, ನಿಂದಕರ ಸಂಗ ಬಹು ಭಂಗ, ಆವಬಲ ವಿದ್ದರೇನು ದೈವ ಬಲವಿಲ್ಲದವಗೆ' ಮುಂತಾದ ವಾಕ್ಯಗಳು ಇದಕ್ಕೆ ಸಾಕ್ಷಿಯಾಗಿವೆ. ಸತ್ವವಿಲ್ಲದೆ ಶೈಲಿ ಇಲ್ಲ ಎಂಬ ಮಾತೊಂದುಂಟು. ಕನಕರ ಅಪಾರ ಅನುಭವ ಸಂಪತ್ತಿ ಅವರ ಶೈಲಿಗೆ ಜೀವಸತ್ವವನ್ನು ಒದಗಿಸಿದೆ. ಮೋಹನ ತರಂಗಿಣಿಯಲ್ಲಿ ಕನಕರು ಅಷ್ಟಾದಶವರ್ಣನೆಗಳಿಗೆ ಸಾಂಪ್ರದಾಯಕವಾಗಿ ಕಟ್ಟು ಬಿದ್ದಿರುವುದುಂಟು. ಆದರೆ ಅವರಿಗೆ ಅಸಾಧಾರಣ ಪ್ರತಿಭೆ ಇರುವುದರಿಂದ ಅವು ಶುಷ್ಕ ನಿರೂಪಣೆಗಳಾಗದೆ 'ವರ್ಣಮಯ ರಸಕೃತಿ'ಗಳಾಗಿವೆ.

ವಿವಿಧ ಭಾವಾನುಭವಗಳನ್ನೂ ನವರಸಗಳನ್ನೂ ಅದಕ್ಕನುಸಾರಿಯಾದ ಭಾಷಾರೂಪದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸುವ ಶಕ್ತಿ ಕನಕರಲ್ಲಿದೆ. ಮೋಹನ ತರಂಗಿಣಿ ಮತ್ತು ನಳಚರಿತ್ರೆ ಕಾವ್ಯ

ಗಳು ಇದಕ್ಕೆ ಒಳ್ಳೆಯ ಆಕರಗಳಾಗಿವೆ. ಶೃಂಗಾರ ಮತ್ತು ಭಕ್ತಿ ರಸಗಳನ್ನು ಮೋಹನ ತರಂಗಿಣಿಯಲ್ಲಿ ಯಶಸ್ವಿಯಾಗಿ ನಿರ್ವಹಿಸಿದ ಪ್ರತಿಭೆ ಕನಕರದು. ಹಾಸ್ಯ ಮತ್ತು ತರ್ಕ ವಿಚಾರಕ್ಕೆ ರಾಮಧಾನ್ಯ ಚರಿತ್ರೆ ಮಾಧ್ಯಮವಾಗಿದೆ. ಕೀರ್ತನೆಗಳು ನೀತಿಯ ಗಣಿಗಳಾಗಿವೆ. ಸಂಸ್ಕೃತ ಮತ್ತು ಕನ್ನಡದ ಹದ ಬೆರಕೆಯಿಂದ ಪಾಕಗೊಂಡು, ಜಾನಪದಕ್ಕೆ ಬೇರು ಬಿಟ್ಟ ಕನಕರ ಶೈಲಿ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಹೊಸ ಒಗರನ್ನೂ ಕಾಂತಿಯನ್ನೂ ಹೊಂದಿದೆ.

## ೬. ಉಪಸಂಹಾರ

ಕನಕದಾಸರು ಕನ್ನಡದ ಶ್ರೇಷ್ಠ ಸಂತ ಕವಿಗಳಲ್ಲಿ ಒಬ್ಬರು. ಅತ್ಯುನ್ನತ ಮಟ್ಟದ ಹರಿದಾಸರು. ಕಾವ್ಯರ್ಷಿಯೂ ರಸಋಷಿಯೂ ಆಗಿದ್ದವರು; ಕನ್ನಡ ಸಾಹಿತ್ಯವನ್ನು ಬಹುಮುಖಗಳಿಂದ ಶ್ರೀಮಂತಗೊಳಿಸಿದವರು. ಜೀವನ ಪಾವಿತ್ರ್ಯಕ್ಕೆ ಮಹತ್ವ ಕೊಟ್ಟವರು; ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು ಕಾಯ್ದುಕೊಂಡವರು.

ಅವರು ಹಿಂದುಳಿದ ವರ್ಗದಿಂದ ಬಂದರೂ ಸಹ ತಮ್ಮ ವ್ಯಕ್ತಿತ್ವದಿಂದ ಸಾಮಾಜಿಕವಾಗಿಯೂ, ಸಾಹಿತ್ಯಕವಾಗಿಯೂ ತುಂಬಾ ಮೇಲೇರಿದವರು. ಇದಕ್ಕಾಗಿ ಅವರು ಬಾಳಿನಲ್ಲಿ ನಿರಂತರ ಸಾಧನೆಯನ್ನು ನಡೆಸಿದವರು. ವಿಜಯನಗರ ಸಾಮ್ರಾಜ್ಯದಲ್ಲಿ ವೀರ ಪಾಳೆಯಗಾರರಾಗಿದ್ದರೂ ಸಹ ಅದನ್ನೆಲ್ಲ ತೊರೆದು ವಿರಾಗಿಯಾಗಿ ಹರಿಮಾರ್ಗದಲ್ಲಿ ನಡೆದವರು. ಪರಿವ್ರಾಜಕ ಪ್ರವೃತ್ತಿಯ ಈ ದಾಸವರೇಣ್ಯ ತಂಬೂರಿಯನ್ನು ಹಿಡಿದು ಊರೂರು ತಿರುಗುತ್ತ ಭಗವತ್ ಭಜನೆ ಮಾಡುತ್ತ ಮುಮುಕ್ಷು

ಗಳಾಗಿ ನಡೆದವರು. ಆತ್ಮೋದ್ಧಾರಕ್ಕೂ ಲೋಕೋದ್ಧಾರಕ್ಕೂ
ದುಡಿದವರು.

ಕನಕದಾಸರು ಕೀರ್ತನಕಾರರು ಮಾತ್ರವಲ್ಲದೆ ಕನ್ನಡದ
ಮಹತ್ವದ ಕವಿಗಳಲ್ಲೊಬ್ಬರು. ಮೋಹನ ತರಂಗಿಣಿ, ನಳಚರಿತ್ರೆ,
ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ ಅವರ ವಿಶಿಷ್ಟ ಕೃತಿಗಳು.
ಕನಕದಾಸರು ಕೀರ್ತನ ಸಾಹಿತ್ಯದ ಒಂದು ಮಹಾಶಿಖರ. ಅವರ
ಕೀರ್ತನೆಗಳು ಅವರ ವ್ಯಕ್ತಿತ್ವದ ನೇರ ಅಭಿವ್ಯಕ್ತಿಯಾಗಿ ಮೂಡಿ
ಬಂದವುಗಳು. "ಕನಕದಾಸರ ಭಕ್ತಿತರಂಗಿಣಿ, ಕೀರ್ತನೆಗಳಲ್ಲಿ
ಹೊರಸೂಸಿ ಹರಿದಿದ್ದಾಳೆ. ಅವರು ಮುಖ್ಯವಾಗಿ ಭಾಗವತ
ಹರಿಭಕ್ತಿಯ ಮತ್ತು ಸರ್ವಾರ್ಪಣದ ಪ್ರತಿಪಾದಕ...ಸಮಾಜ
ವಿಮರ್ಶೆ ಮತ್ತು ಜನಜೀವನ ಚಿತ್ರಕ್ಕೆ ಮೀಸಲಾದ ಎಷ್ಟೋ
ಕೀರ್ತನೆಗಳಿವೆ...ಅವರ ಕಳಕಳಿ ನೈಜ, ಮಾತು ಹರಿತ-ನಿರೀಕ್ಷಣೆ
ತೀವ್ರ ಎಂಬುದು ತಿಳಿಯುತ್ತದೆ. ಅವರ ಕಿರುನುಡಿಗಳು ಕೆಲವು
ಸಲ ಕಿಡಿಯಂತೆ ಸಿಡಿಯುತ್ತವೆ. ಅವುಗಳ ಚಮಕ ಆಚ್ಚರಿಯನ್ನು
ಹುಟ್ಟಿಸುತ್ತದೆ."[1] ಒಟ್ಟಾರೆ ಅವರ ಸಮಗ್ರ ಸಾಹಿತ್ಯವು ಕಾವ್ಯ
ಮೌಲ್ಯ ಮತ್ತು ಜೀವನ ಮೌಲ್ಯಗಳಿಂದ ಪರಿಪ್ಲುತವಾಗಿದೆ.

ಕನಕದಾಸರು ವಿನಯವನ್ನೂ, ವೀರತ್ವವನ್ನೂ ರೂಢಿಸಿಕೊಂಡಿ
ದ್ದವರು. ಎಲ್ಲರಿಗೆ ತಲೆಬಾಗಿ ಎಲ್ಲರೂ ತಲೆ ಬಾಗುವಂತೆ
ಮಾಡಿದವರು. ಬದುಕಿನಲ್ಲೂ ಸಾಹಿತ್ಯದಲ್ಲೂ ಕ್ರಾಂತಿಯನ್ನೂ
ಭಕ್ತಿಯನ್ನೂ ಬೆರಸಿದ ಅಪರೂಪದ ಸಾಹಿತಿ ಸಂತರು.

---

1. ಮುಗಳಿ. ರಂ. ಶ್ರೀ., ಕನ್ನಡ ಸಾಹಿತ್ಯ ಚರಿತ್ರೆ, ೧೯೬೮, ಪು ೨೯

## ಉಪಯುಕ್ತ ಕೃತಿಗಳು

೧. ಮಹಾತ್ಮ ಕನಕದಾಸ ಪ್ರಶಸ್ತಿ
ರಾಜ್ಯ ಸಮಿತಿ, ಕನಕದಾಸರ ೪ನೆಯ ಶತಮಾನೋತ್ಸವ ಸಮಿತಿ, ೧೯೬೫. ಬೆಂಗಳೂರು

೨. ಕನಕ ಕಿರಣ — ಕಾ.ತ. ಚಿಕ್ಕಣ್ಣ (ಸಂ)

೩. ಕನ್ನಡ ಸಾಹಿತ್ಯ ಚರಿತ್ರೆ — ಡಾ. ರಂ.ಶ್ರೀ. ಮುಗಳಿ

೪. ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ — ಮರಿಯಪ್ಪ ಭಟ್ಟ

೫. ಕನ್ನಡ ಕವಿ ಚರಿತೆ — ರಾ. ನರಸಿಂಹಾಚಾರ್

೬. ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ — ತ.ಸು. ಶಾಮರಾಯ

೭. ಕನ್ನಡ ಸಾಹಿತ್ಯ ಇತಿಹಾಸ — ಕೆ. ವೆಂಕಟರಾಮಪ್ಪ

೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ — ಬೆಂಗಳೂರು ವಿಶ್ವವಿದ್ಯಾನಿಲಯ

೯. ಕನಕದಾಸರ ಚರಿತ್ರೆ — ಬ್ರಹ್ಮಶ್ರೀ ರಾಮಲಿಂಗ ಕವಿ

೧೦. ಕನಕದಾಸರ ಕೀರ್ತನೆಗಳು — ೪ನೆ ಶತಮಾನೋತ್ಸವ ಸಮಿತಿ

೧೧. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ
ತ.ಸು. ಶಾಮರಾಯ, ಮೋ. ರಾಜೇಶ್ವರಯ್ಯ

೧೨. ಭಕ್ತ ಕನಕದಾಸರು—ಪದಗಳು — ಟಿ.ಎಸ್. ಕೃಷ್ಣಯ್ಯ
ಶೆಟ್ಟಿ ಅಂಡ್ ಸನ್ಸ್ ಬೆಂಗಳೂರು—೨

೧೩. ರಾಮಧಾನ್ಯ ಚರಿತ್ರೆ — ಡಾ. ದೇ. ಜವರೇಗೌಡ

೧೪. ನಳಚರಿತ್ರೆಯ ಸಂಗ್ರಹ — ಎಚ್.ಎಂ. ಶಂಕರನಾರಾಯಣರಾವ್

೧೫. ಕ. ಮೋಹನ ತರಂಗಿಣಿ ಸಂಗ್ರಹ ಬಿ.ಎಸ್. ಸಣ್ಣಯ್
೧೬. ಹರಿದಾಸ ಹೃದಯ ಡಾ. ಜಿ. ವರದರಾಜರಾವ್
೧೭. ಕರ್ನಾಟಕ ಭಕ್ತ ವಿಜಯ ಬೇಲೂರು ಕೇಶವದಾಸರ
೧೮. ಕನಕದಾಸರ ಭಕ್ತಿ ಗೀತೆಗಳು ಬೆಟಗೇರಿ ಕೃಷ್ಣಶರ್ಮ
ಬೆಂಗೇರಿ ಹುಚ್ಚೂರಾಯ
೧೯. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ
ಕೀರ್ತನಕಾರರು ಎಚ್.ಎಸ್. ವೆಂಕಟೇ
ಮೂರ್ತಿ
೨೦. ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಡಾ. ಎಚ್. ತಿಪ್ಪೆ
ರುದ್ರಸ್ವಾಮಿ

ಕೆ.ಸಂ. ೨೭೪೪೪—ಎಂ.ಯು.ಪಿ.ಎಂ.—೫,೦೦೦ ಪ್ರತಿಗಳು—೧೨-೬-

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎಸ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ